# ಕೋರಿಕೆ.

ಗ್ರಂಥಕರ್ತರು.

**ಈಶ್ವರ ಸಣಕಲ್ಲ, ರಬಕವಿ.**



ಪ್ರಕಾಶಕರು,

**ರಾ|| ಸಾ|| ಫ. ಗು. ಹಳಕಟ್ಟಿ,**

**ವಿ ಜಾ ಪು ರ.**

---

**೧೯೩೪.**

ನಿವೇದನ



**ನನ್ನ ಬಾಳಿನ ಗೆಳೆಯರಾದ**

**ವೆಂಕಟ ಶಿವಲಿಂಗರಿಗೆ**

# ಮುನ್ನುಡಿ.

ಕಾವ್ಯದ ಪ್ರಯೋಜನಗಳೆಂದು ನಾಲ್ಕಾರು ಹೇಳುವರು ಅವು ಆನಂದ, ದುಡ್ಡು. ಕೀರ್ತಿ, ಉಪದೇಶ, ಸಂಕಟವಿನಾಶನ, ವ್ಯವಹಾರಜ್ಞಾನ. ಅವುಗಳಲ್ಲಿ ಆನಂದವು ಸದ್ಯಃಫಲವು; ನಿರಪೇಕ್ಷವು ಸ್ವಯಂಪೂರ್ಣವು. ಹಸಿವು ನೀರಡಿಕೆ ಹಿಂಗಿದ್ದಕ್ಕೆ ತೇಗಿದ್ದೆ ಸಾಕ್ಷಿಯಿದ್ದಂತೆ. ಕಟ್ಟಿದೊಡನೆ ಕವಿಗೂ, ಕಿವಿ ಮುಟ್ಟಿದೊಡನೆ ರಸಿಕನಿಗೂ ಉಂಟಾಗುವ ರಸಭಾವವದು. ಇಂಥ ಕಾವ್ಯಕ್ಕೆ ಯಾರಾದರೂ ದುಡ್ಡು ಕೊಡಲು ಮುಂದುವರಿದರೆ ಸ್ಪೃಹಣೀಯವಾದ ಆನಂದವು ಕಾವ್ಯದಲ್ಲಿದ್ದುದರ ಲಕ್ಷಣವದು ಎನ್ನಬಹುದು. ಹಾಗೆ ಕೊಡಲಾಗದವರೂ ತಮ್ಮ ಹೊಗಳಿಕೆಯಿಂದ ಬಾಯಕಾಣಿಕೆಯನ್ನಿತ್ತರೆ ಅದರ ಭಾಂಡಾರವೇ ಕೀರ್ತಿರೂಪವಾಗುವದು. ನಿಂದೆಯು ಸಾಮಾನ್ಯ ಮನುಷ್ಯಸ್ವಭಾವವಾಗಿರುವಾಗ ಹೊಗಳಿಕೆಯ ಗುಣವಿದ್ದಲ್ಲಿಯೇ ಸಹಜ ಪೂರ್ವದಲ್ಲಿ ದುಡ್ಡು ರಾಜರಿಂದ ಬರುತ್ತಿತ್ತು. ಈಗ ಅದನ್ನು ಪ್ರಜೆಗಳಿಂದ ಪೇಕ್ಷಿಸಬೇಕಾಗಿದೆ. ಕೀರ್ತಿಯಲ್ಲಿ ಎರಡು ತೆರ ಕಾಲಿದಾಸಾದಿಗಳ ಕೀರ್ತಿಯಂತೆ ಕವಿ ಇದ್ದಾಗಲೆ ಪ್ರಾರಂಭವಾಗಿ ಅವನು ತೀರಿದ ಮೇಲೂ ತೀರದೆ ಹಬ್ಬುತ್ತಿರುವದೊಂದು. ಮುದ್ದಣನ ಕೀರ್ತಿಯಂತೆ ಕವಿ ತೀರಿದ ಮೇಲೆ ಪ್ರಲಪಿಸುವದಿನ್ನೊಂದು. ಉಪದೇಶ, ವ್ಯವಹಾರಜ್ಞಾನಗಳು ಕಾವ್ಯದಲ್ಲಿ ಸೇರಬೇಕಾದರೆ ಕಾಂತೆಯರ ನಾಲಗೆಯನ್ನು ತೆರವು ತರಬೇಕು; ಇಲ್ಲವೆ ವೇಶ್ಯೆಯರ ವೇಷಭೂಷಣಗಳನ್ನು ಹೊರಬೇಕು. ಇಷ್ಟಾಗಿ ಇಂಥ ಉಪದೇಶ ವ್ಯವಹಾರಜ್ಞಾನಗಳಿಂದ ಜಾಣರಾದವರನ್ನು ನಾ ಬೇರೆ ಕಾಣೆ. ಉಳಿಯಿತು ಸಂಕಟವಿನಾಶನ.

ಮಯೂರ ಕವಿಯು ರೋಗನಿವಾರಣೆಗಾಗಿ 'ಮಯೂರಶತಕ'ವನ್ನೂ ಪದ್ಮಣಾಂಕನು ಪಾಪಕ್ಷಯಾರ್ಥವಾಗಿ 'ಪದ್ಮಣಾಂಕ' ಪುರಾಣವನ್ನೂ ಬರೆದುದನ್ನು ಕೇಳಿದ್ದೇವೆ. ಆದರೆ ಇವು ಸಾಹಿತ್ಯೇತಿಹಾಸದ ಕೃತ ಯುಗ ಕತೆಗಳಂತೆ ಕಂಗೊಳಿಸುವವು. ಸಾಲದ ಶೂಲವನ್ನು ತಪ್ಪಿ ಸಿಕೊಳ್ಳಲು ಗೋಲ್ಡಸ್ಮಿತ್‌ನೂ, ಬಡತನದ ಬೇಗೆಯನ್ನು ನಂದಿಸಲು ಭೋಜಪ್ರಬಂಧದೊಳಗೆ ಕಥಿತರಾದ ಕವಿಗಳೂ ಅನುಸರಿಸಿದ ರೀತಿಯು ಕಲಿಯುಗದ ಚುಟ್ಟುನಡತೆಯಾಗಿ ತೋರುವದು. ಕವಿಯ ಸಿರಿಯು ರಸಿಕರ ಐಶ್ವರ್ಯವನ್ನವಲಂಬಿಸಿದೆ. ಬಾಳುವದೇ ಒಂದು ದೊಡ್ಡ ಸಾಹಸವಾದ ಯುಗದಲ್ಲಿ ಎಲ್ಲಿಯ ರಸಿಕ? ಎಲ್ಲಿಯ ಕವಿ? ಎಲ್ಲರೂ ಬರಿ ದೇಹಧಾರಿಗಳಾದ ಪ್ರಾಣಿಗಳು ಮಾತ್ರ. ಆದರೂ ಕಾವ್ಯಕ್ಕೂ ದೇಹವಿರುವಂತೆ, ಕವಿಗೂ ದೇಹವಿದೆ. ಆ ದೇಹ ಮೂಲಕವಾ ಗಿಯೇ ಅವುಗಳ ಆತ್ಮದ ಪರಿಚಯುವಾಗತಕ್ಕುದೆಂಬುದನ್ನು ಸಾಮಾ ಜಿಕರು ಅರಿತು, ಅನಂದದ ಪಥವನ್ನು ತೆರೆದು ತೋರುವ ಕಲಾ ಕೋವಿದರೊಳಗಿನ ಕವಿಯಸ್ಥಾನವನ್ನು ಕಂಡು ಹಿಡಿದು, ಇಂಥ ಕೆಲ ಜೀವಿಗಳು ಜೀವಿಸಿರುವದೂ ಪ್ರಪಂಚದ ಅಗತ್ಯಾಂಶಗಳಲ್ಲೊಂದೆಂದು ನಂಬಿ, ಕವಿಗೂ ಅದರ ಮೂಲಕ ಕಾವ್ಯಕ್ಕೂ ಅವಕಾಶವನ್ನು ಕಲ್ಪಿಸಿಕೊಡಬೇಕು. ಶ್ರೀಯು ಕೀರ್ತಿ ಆನಂದಾದಿಗಳ ಒಂದು ಪ್ರತ್ಯಕ್ಷ ರೂಪವೇ ಇದೆ. ಸರಸ್ವತಿಗೆ ಅವಳ ಆಧಾರವು ಬೇಕು.

ಶ್ರೀಗೂ ಸರಸ್ವತಿಗೂ ಇರುವ ಹಗೆತನದ ಕತೆಯು ಕನ್ನಡ ಕವಿಗಳಲ್ಲಿ ಕೆಲವರ ಬಗ್ಗೆ ಕೇವಲ ಕತೆಯೇ ಎಂದು ತೋರಿದರೂ ಸಾಹಿತ್ಯೇತಿಹಾಸದಲ್ಲಿ ಅದೊಂದು ನಿಜವಾದ ನಿಯಮವಾಗಿ ಸಾಗಿ ಬಂದಿದೆ. ಕಾವ್ಯವು ಸ್ವಾನಂದಲಹರಿಯೆಂದೂ, ಸ್ಫೂರ್ತಿವಿಲಾಸ ವೆಂದೂ ಕಾವ್ಯ ಶಾಸ್ತ್ರವು ಜಂಬ ಕೊಚ್ಚಿದಂತೆಲ್ಲ ಅದರ ಸತ್ಯವನ್ನು ಮನಗಾಣಬೇಕೆಂಬಪೇಕ್ಷೆಯಿಂದಲೋ ಏನೋ ಸಮಾಜವು ಕವಿಗಳ

ಸತ್ವಪರೀಕ್ಷೆಗೇ ಪಣ ತೊಟ್ಟಂತೆ, ಶಕ್ತಿಯಿದ್ದರೆ ವ್ಯಕ್ತವಾಗಲಿ ಎನುವಂತೆ, ಅವರನ್ನು ದುರ್ಲಕ್ಷಿಸುವದು. 'ಗಂಡಹೆಂಡಿರ ನಡುವೆ ಕೂಸು ನುಗ್ಗಿ' ಎನುವ ಗಾದೆಯಂತೆ ಕವಿಸಾಮಾಜಿಕರ ನಿರಪೇಕ್ಷೆ ಉಪೇಕ್ಷೆಗಳಲ್ಲಿ ಸಾಹಿತ್ಯವು ಬಡವಾಗುವದು. ಅದರ ಆನಂದದಾಯಕ ಶಕ್ತಿಯು ಹಿಂಗುವದು. ಅಲ್ಲಿ ಗಂಧರ್ವನಗರಗಳು, ನಂದನವನಗಳು ಕಾಣುವದರ ಬದಲು ಪ್ರಳಯದ ಮೋಡಗಳ ಮುಂಚೂಣಿಯ ಸುಳಿದಾಟವು ಕಂಡು ಬರುವದು. ಇದು ಸೃಷ್ಟಿಯ ಸ್ವಭಾವವಾದರೂ ಸಂಸಾರಕ್ಕೆ ಹಿತವಲ್ಲ.

ಈ ಕವನಗಳ ಕವಿಗಳಾದ ಶ್ರೀ. ಈಶ್ವರ ಸಣಕಲ್ಲ ಇವರು ಹಳ್ಳಿಯಲ್ಲಿ ಹುಟ್ಟಿ ಬೆಳೆದವರು. ಬಯಕೆ ಇದ್ದರೂ ಬೇಕಾದಷ್ಟು ಶಿಕ್ಷಣ ಪಡೆಯದವರು. ಬೇಡಾಗಿದ್ದರೂ ಬಡತನದ ಬಲೆಯ ಹೊರಗೆ ಕಾಲಿಕ್ಕಲು ಬರದಾದವರು. ಹೀಗೆ ಹುಟ್ಟಿನಿಂದ ಬಡವರಾದರೂ ಕೆಚ್ಚಿನಿಂದ ಕವಿಗಳು. ತಮ್ಮ ಭಾವಪ್ರಪಂಚವನ್ನೆ ಮುಸುಕಿ ಮುಳುಗಿಸಲು ಬರುವ ಮೇಘಮಾಲೆಗಳ ಮೇಲೆ ಎಸೆದ ಮಿಂಚಿನಂಥ ಅವರ ಮಂತ್ರಾವಳಿಯ ಕ್ಷಣಭಂಗುರ ಲೀಲೆಯನ್ನು ಕಂಡು ಆಸೆ ನಿರಾಸೆಗಳು ರಸಿಕರ ಮನವನ್ನು ಒಮ್ಮಿಲೆ ಕವಿಯುವವು. ಅವರು 'ಬಡತನವೆ ಬೇಕು' ಎಂದು ಹಾಡುವದನ್ನೋದಿ "ಅಪ್ಪಾ! ಕೊಟ್ಟಿದ್ದುದು ಸಾಕಿದೆ ಮತ್ತೆ ಬೇರೆ ಪ್ರಾರ್ಥನೆಯೇಕೆ ?" ಎನ್ನುವಂತೆನಿಸುವದು. 'ಹೇಳಲಾರದ ದುಃಖ'ದ ಹಾಡೂ ಅದೇ.

'ಅಳುವದೇನಂತರಾತ್ಮನ ದುಃಖಭಂಜನೆಗೊ?
ಇಲ್ಲದೊಡೆ, ಓ ಗೆಳೆಯ, ಜನಮನೋರಂಜನೆಗೊ ?' ॥
(ಗೂಬೆಯ ನರಳಾಟ)

ಕೇಳುವವರಿಗೂ ಈ ಪ್ರಶ್ನೆಯುಂಟಾಗುವದು.

## ಕೋರಿಕೆ

ಶ್ರೀ. ಸಣಕಲ್ಲ ಇವರಲ್ಲಿಯೂ ಕವಿಜಾತಿ ಸಹಜವಾದ ತೀರದ ಉತ್ಸಾಹವೂ ಮೀರಿದ ಆಸೆಯೂ ಇವೆ. ಆ ಬಲದಿಂದ ಅವರು ಉನ್ನತವಾದ ಊರ್ಜಿತವಾದ ಲೋಕಗಳನ್ನು ತೆರೆದು ತೋರಿಸುವರು. ಈ ಕಾವ್ಯಕರ್ಮವನ್ನು ಅವರು ಹೆಚ್ಚಾಗಿ ಮಾಡಬೇಕಾದರೆ ಸಮಾಜದ ಸಹಾನುಭೂತಿ ಬೇಕು.

ಶ್ರೀ. ರಾ॥ ಸಾ॥ ಫ. ಗು. ಹಳಕಟ್ಟಿಯವರು ಈ ಕವನಸಂಗ್ರಹವನ್ನು ಪ್ರಕಟಿಸಿದುದು ಆ ಸಹಾನುಭೂತಿಯ ದರ್ಶನಾರಂಭವೆಂದೇ ನಾನು ಬಗೆಯುತ್ತೇನೆ. ಈ ಸುಚಿನ್ಹದಿಂದ ಉತ್ಸಾಹಿತರಾಗಿ ಶ್ರೀ. ಸಣಕಲ್ಲ ಇವರು ಇದಕ್ಕೂ ಸರಸವಾದ ಕಾವ್ಯಗಳನ್ನು ನಮ್ಮ ಜನತೆಗೆ ನೀಡುವರೆಂದೂ, ಕನ್ನಡ ವಾಚಕ ವರ್ಗವು ಅವರನ್ನು ಪ್ರೋತ್ಸಾಹಿಸುವದೆಂದೂ ನಾನು ನಂಬಿದ್ದೇನೆ.

ಮಂಗಳವಾರ<br>ತಾ. ೧೮-೯-೩೪

ದ. ರಾ ಬೇಂದ್ರೆ.

---

# ಅರಿಕೆ.

→※0※←

ಈ ಹೊತ್ತಿಗೆಯು ಇಂದು ಬೆಳಕು ಕಾಣುವ ಸುಯೋಗವನ್ನು ಪಡೆದುದಕ್ಕೆ ಮೂಲಕಾರಣರು ಶ್ರೀಯುತ ರಾ॥ ಸಾ॥ ಫ. ಗು. ಹಳಕಟ್ಟಿಯವರು. ಅವರು ನನ್ನ ಬಾಳುವೆಯಲ್ಲಿ ಆದೆಷ್ಟೋ ಸಲ ತಂದೆಯ ಹಾಗೆ ಸಹಾಯ ಸಹಾನುಭೂತಿಗಳನ್ನು ತೋರಿಸಿದಂತೆ, ಇಂದಿಗೆ ಕೆಲವು ದಿವಸಗಳ ಹಿಂದೆ, ನನ್ನ ಕವನಗಳನ್ನೆಲ್ಲ ಕಲೆ ಹಾಕಿ ಪುಸ್ತಕರೂಪದಿಂದ ಪ್ರಕಟಿಸುವ ತಮ್ಮ ಸದುದ್ದೇಶವನ್ನು ಒಂದು ಪತ್ರದಿಂದ ನನಗೆ ವ್ಯಕ್ತಪಡಿಸಿದರು. ಆದಕ್ಕೆ ನಾನೂ ಒಪ್ಪಿದೆ

ಮುಂದೆ ನನ್ನ ಪ್ರಪಂಚದಡಚಣಿಯಲ್ಲಿ ಈ ಕಾರ್ಯವನು ಬೇಗ ಕೊನೆಗಾಣಿಸುವದಾಗಲಿಲ್ಲ. ಬಿಡುವು ದೊರೆತಹಾಗೆ ಬರೆಬರೆದು ಮುಗಿಸಿ, ಎಲ್ಲ ಕವನಗಳನ್ನು ಶ್ರೀಯುತ ಬೇಂದ್ರೆ ದತ್ತಣ್ಣನ ಕಣ್ಣಿಗೆ ಹಾಕಿದೆ. ಅದರಂತೆ, ಶ್ರೀಯುತ ಪ್ರೊ. ಗೋಕಾಕ ವಿನಾಯಕಣ್ಣನೂ, ಕಲ್ಲೂರ ಕೃಷ್ಣಕುಮಾರರೂ, ನನಗಾಗಿ ಆ ಕವನಗಳನ್ನೆಲ್ಲ ಅವಲೋಕಿಸುವ ಶ್ರಮ ವಹಿಸಿದರು. ಎಲ್ಲರೂ ಕೂಡಿ, ತಮ್ಮ ಮಹತ್ವದ ವೇಳೆಯನ್ನು ವೆಚ್ಚಮಾಡಿ ಆಯುವ, ತಿದ್ದುವ ಕಾರ್ಯದಲ್ಲಿ ಯೋಗ್ಯ ಸಲಹೆ ಸೂಚನೆಗಳನ್ನು ಕೊಟ್ಟುದಲ್ಲದೆ, ಕೊನೆಗೆ ಶ್ರೀಯುತ ಬೇಂದ್ರೆಯವರು ನನ್ನಂಥ ಬಡವನ ಬಿನ್ನಹವನ್ನು ಮನ್ನಿಸಿ, ಅವುಗಳಿಗೆ ಒಂದು ಮುನ್ನುಡಿಯನ್ನು ಸಹ ಬರೆದುಕೊಟ್ಟರು. ಈ ಎಲ್ಲ ಅಣ್ಣಂದಿರರಿಗೂ ಮತ್ತು ಶ್ರೀಯುತ ಹಳಕಟ್ಟಿಯವರಿಗೂ ನಾನು ಚಿರಋಣಿಯು! ಯಾಕಂದರೆ ಈ ಎಲ್ಲ ಮಹನೀಯರ

ಕೃಪೆಯು ಬಲದಿಂದಲೇ ಈ ಪುಸ್ತಕವು ಪ್ರಕಟವಾಗುವ ಯೋಗವು ಬಂದಿತೆಂದು ಮತ್ತೆ ಮತ್ತೆ ಹೇಳದಿರಲಾರೆ!

ಈ ಹೊತ್ತಿಗೆಯಲ್ಲಿಯ ಒಂದೆರಡು ಕವನಗಳನ್ನುಳಿದು, ಎಲ್ಲ ವನ್ನೂ ಬರೆದ ಕಾಲದ ಕ್ರಮದಲ್ಲಿಯೇ ಜೋಡಿಸಲಾಗಿದೆ. ಇದರಲ್ಲಿ ಕೆಲವು ಹೊಸ ಕವನಗಳೂ ಇವೆ. ಉಳಿದವುಗಳಲ್ಲಿ ಕೆಲಕೆಲವು ಜಯಕರ್ನಾಟಕ, ಪ್ರಬುದ್ಧಕರ್ನಾಟಕ, ರಂಗಭೂಮಿ, ಕಥಾಂಜಲಿ, ಕರ್ನಾಟಕ ವಿಶ್ವವಿದ್ಯಾಲಯ ಪತ್ರಿಕೆ, ಶಿವಾನುಭವ, ರಾಜಾರಾಮಿ ಯನ್, ಜಿನವಿಜಯ ಮೊದಲಾದ ಪತ್ರಿಕೆಗಳಲ್ಲಿ ಈ ಮೊದಲೇ ಪ್ರಕಟವಾಗಿರುವವು. ಆ ಕವನಗಳಿಗೆ ತಮ್ಮ ಪತ್ರಿಕೆಗಳಲ್ಲಿ ಎಡೆ ಗೊಟ್ಟ ಆಯಾ ಪತ್ರಿಕೆಯ ಸಂಪಾದಕರಿಗೆ ನನ್ನ ಕೃತಜ್ಞತೆಯ ಅಭಿವಂದನೆಗಳು.

ಈ ಸಂಗ್ರಹದಲ್ಲಿಯ ಕವನಗಳ ಬಗೆಗೆ, ಏನಾದರೂ ಹೇಳ ಬೇಕೆಂದರೆ, ನಾನು ಹೆಚ್ಚು ಕಲಿತವನೂ ಅಲ್ಲ; ಹೆಚ್ಚಾಗಿ ತಿಳಿದ ವನೂ ಅಲ್ಲ; ವಿಮರ್ಶಕನಂತು ಮೊದಲೇ ಅಲ್ಲವೇ ಅಲ್ಲ. ಹೀಗಿರಲು ಇವು ಇಂತಹವೇ ಎಂದು ಹೇಗೆ ಹೇಳುವದು? ಇವು ಸರಸವಾ ಗಿರುವವೋ ಇಲ್ಲವೆ ವಿರಸವಾಗಿರುವವೋ, ನೀರ ಮೇಲಣ ಗುಳ್ಳೆಯಂತೆ ಕ್ಷಣಭಂಗುರವಾಗಿರುವವೋ ಅಥವಾ ಕಾಲದ ಒರೆಗೆ ಹತ್ತಿ ಕೆಲಕಾಲದ ವರೆಗಾದರೂ ಬಾಳಲಿರುವವೋ, ನಾನರಿಯೆ! ಒಂದು ವೇಳೆ ಇವು ವಿರಸವಾಗಿ, ನೀರಮೇಲಣ ಗುಳ್ಳೆಯಂತೆ ಇವುಗಳ ಹಾಡಾಗಿದ್ದುದು ದಿಟವೇ ಆದ ಪಕ್ಷದಲ್ಲಿ ಅದರಿಂದ ನನಗೆ ಯಾವ ನೋವೂ ಇಲ್ಲ! ಮನಕೆ ಯಾವ ಬಗೆಯ ಕೆಡಕೂ ಇಲ್ಲ. ಯಾಕಂದರೆ

ಕದಡಿದಾ ಕಡಲಿನಲಿ, ಕುದಿಯುವಾ ಒಡಲಿನಲಿ,
ಬೇಡೆಂದರೂ, ಒಗೆಯುತಿಹವೇಕೆ ಗುಳ್ಳೆ?

**ಕೋರಿಕೆ.**

ಶಾಂತವಾಗಲು ಕಡಲು, ತಣಿವುಗೊಳ್ಳಲು ಒಡಲು,
ಇರಲೆಂದರೂ, ಒಡೆದು ಜಲವಪ್ಪವಲ್ಲೇ? ॥೧॥
ಕಾಲಶರಧಿಯು ಕದಡಿ, ಬಾಳಬಸಿರದು ಕುದಿದು,
ಇಂದಿಂತು ಪುಟ್ಟಿದೀ ಹಾಡಗುಳ್ಳೆ
ಶಾಂತವಾಗಲು ಕಾಲ, ತಣಿವುಗೊಳ್ಳಲು ಬಾಳು,
ಲೀನವಾಗಲಿ ಕಾಲಶರಧಿಯಲ್ಲಿ! ॥೨॥

ಎಂದು ಕೊನೆಗೆ ಸಮಾಧಾನದಿಂದ ಇಷ್ಟೇ ನುಡಿದು ಸುಮ್ಮನಾಗುವೆ!

ಭಾನುವಾರ — ಕನ್ನಡತಾಯಿಯ ಊಳಿಗದಾಳಾದ
ತಾ॥ ೩೦—೯—೧೯೩೪ — **ಈಶ್ವರ ಸಣಕಲ್ಲ ರಬಕವಿ.**

---

# ಪರಿವಿಡಿ.



## ಕೋರಿಕೆ

## ಕೋರಿಕೆ

# ಶುದ್ಧಾ ಶುದ್ಧಿ ಪತ್ರಿಕೆ.

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೧ | ೧೭ | ಸಿಂತಿದೆ | ಸಿಂತಿರೆ |
| ೧೨ | ೧೭ | ಬಡಿದು | ಬಡೆದು |
| ೧೩ | ೧೬ | ಹೊನ್ನು | ಹೊನ್ನ |
| ೧೩ | ೧೮ | ತಗಬಗೆಯುನವರತು | ತಗಬಗೆಯುನವರತ |
| ೧೪ | ೧ | ತಾಯಿ | ತಾಯೆ |
| ೧೮ | ೧೬ | ಯೊಗದಿಹರು | ಯೊಗೆದಿಹರು |
| ೧೯ | ೪ | ಅಡಕೆ | ಅದನೆ |
| ೨೩ | ೧ | ಬಲಸ್ವಾರ್ಥಿ | ಖಲಸ್ವಾರ್ಥಿ |
| ೨೫ | ೫ | ಎತ್ತೆತ್ತಲೀಕ್ಷಿಸಿದೊಡುತ್ತತ್ತ | ಎತ್ತೆತ್ತಲೀಕ್ಷಿಸಿದೊಡತ್ತತ್ತ |
| ೩೭ | ೬ | ಗೊಟ್ವ | ಗೊಟ್ಟು |
| ೪೪ | ೮ | ಮೇಲ್ಭರುವವವು | ಮೇಲ್ಬರುವವವು |
| ೪೮ | ೧೮ | ನಿರುಗಸುವ ಬಗೆಯು | ನಿರುಕಿಸುವ ಬಗೆಯು |
| ೫೩ | ೬ | ನಂಬಿಸುತ | ನಂಟಿಸುತ |
| ೫೪ | ೧೦ | ಹುಡುಗಿಸುತೆ | ಹುದುಗಿಸುತೆ. |
| ೫೮ | ೭ | ಅಸೆನುಡಿಯ | ಆಸೆನುಡಿಯ |
| ೫೮ | ೮ | ಘಾಸಿಗೊಳಿಸಿ | ಘಾಸಿಗೊಳಿಸಿ, |
| ೬೪ | ೪ | ವಳಕುತಿರುವೆ | ವಳುಕುತಿರುವೆ |
| ೬೯ | ೨೨ | ಗುರುತುಸಿರಿದೊಡೆ ನಿ | ಗುರುತುಸಿರಿದೊಡೆ? |
| ೭೧ | ೬ | ಸಂತುಸದಲಿ | ಸಂತಸದಲಿ |
| ೭೮ | ೨ | ನುಂಗಿಸುತ್ತಿರಲಿ | ನುಂಗಿ ಸುತ್ತಿರಲಿ |
| ೮೧ | ೫ | ಶರಣಪಕ್ಕಿಗಳೆಲ್ಲ | ಶರಣಪಕ್ಷಿಗಳೆಲ್ಲ |
| ೮೧ | ೧೯ | ಪಲ್ಲಟನೆ | ಪಲ್ಲಟವೆ |
| ೮೧ | ೨೦ | ಹಿಡಿದು | ಹಿಡಿಯಲು |
| ೮೪ | ೬ | ಸ ಖಾಸೆಯು | ಸುಖಾಸೆಯು |

| | | | |
|---|---|---|---|
| ೮೭ | ೧೪ | ದೇವನೂತರಗೆ ಬಹರಿತ್ತ | ದೇವದೂತರಿಗೊಬಹರಿತ್ತ |
| ೯೦ | ೧೪ | ಬಗೆವಯುಕೆಡಾವ | ಬಗೆವಯುಕೆರಾವ |
| ೯೩ | ೪ | ಪರ | ಏರ |
| ೯೭ | ೪ | ಕಮ್ಮಲರಂತರಗಳಲಿ | ಕಮ್ಮಲರಂತರಳಲಿ |
| ೯೮ | ೮ | ಗೂಗುಡುಗೇಕೆ | ಗೂಗುಡುವೇಕೆ |
| ೧೦೧ | ೪ | ಸಾರಿ | ಸಾರ |
| ೧೦೨ | ೧ | ಕಷ್ಟಗಳ | ಕಪ್ಪಗಳ |
| ೧೦೩ | ೨೦ | ಮನಮೆರೆತು | ಮನಮರೆತು |
| ೧೦೮ | ೧ | ಕಡೆ | ಕರೆ |
| ೧೦೮ | ೧೨ | ನಿನಗ | ನಿನಗಪ್ಪ |
| ೧೧೬ | ೨ | ಭಾವದ | ಭಾರದ |
| ೧೧೭ | ೧೧ | ಬೆಂದು | ಬೆಂಡು |
| ೧೧೮ | ೧೬ | ನಿನ್ನೆದೆಯೊಳು | ನಿನ್ನೆಡೆಯೊಳು |
| ೧೧೯ | ೩ | ಬಗೆದು | ಒಗೆದು |
| ೧೧೯ | ೩ | ಮಣ್ಣೂಡಲೆಂದಿವನು | ಮಣ್ಣಾಗಡಲೆಂದಿವನು. |

ಕೆಳಗೆ ಬರೆದವುಗಳು / ಹೀಗೆ ಮಾಡಿದಲ್ಲಿ ಬಿಡಿಸಿರುತ್ತವೆ ಅವುಗಳನ್ನು ಕೂಡಿಸಿ ಓದಬೇಕು.

೨೭ ನೇ ಪುಟದಲ್ಲಿ ೭ ನೇ ಸಾಲು:— ಹೀನವಹುದೆಂತ। ಪರಿಪೂರ್ಣವಹುದರಿಯೆನೇ ?

೩೪ ನೇ ಪುಟದಲ್ಲಿ ೨ ನೇ ಸಾಲು— ಹಿಮಕರ / ರಕ್ಷಿಯೊಳಿರಿಸಿ

೧೦೧ನೇ ಪುಟದಲ್ಲಿ ೭ ನೇ ಸಾಲು— ಕಣ್ಣಿನೊಳ। ಹೊರಳಿಸುತನಂತ

೧೦೪ ನೇ ಪುಟ ೮ನೇ ಸಾಲು ತಮ್ಮೊಳಿಪ್ಪಾದ ಕೆಡೆಯೀಯಲೆಂದೇ ಹೀಗೆ ಅದೆ ಅದನ್ನು ತಮ್ಮೊಳಿಪ್ಪ ಪಾದಕೆಡೆಯೀಯಲೆಂದೇ! ಎಂದು ತಿಳಿಯತಕ್ಕದ್ದು.

# ಕೋರಿಕೆ.

## ಕೋರಿಕೆ.

೧

ಜಗವೆಲ್ಲ ನಗುತಿರಲಿ,
ಜಗದಳುವು ನನಗಿರಲಿ!
ನಾನಳಲು ಜಗವೆನ್ನನೆತ್ತಿಕೊಳದೇ?
ನಾ ನಕ್ಕು, ಜಗವಳಲು, ನೋಡಬಹುದೇ?

೨

ತೆರವಾಗಿ ನನ್ನೆದೆಯು,
ಧರೆಯೊದೆಯು ಉಕ್ಕಿರಲಿ!
ಧರೆಯೊಳಗೆ ತೇಲಿಸುವೆನೆನ್ನೆದೆಯನು!
ಧರೆ ಬತ್ತಿ, ಎನ್ನೆದೆಯು ಉಕ್ಕಲೇನು?

೩

ಪೊಡವಿಯೈಸಿರಿ ವಡೆಸು,
ಬಡತನವು ನನಗಿರಲಿ!

**ಕೋರಿಕೆ**

ಕೈಯೊಡ್ಡೆ, ಪೊಡವಿಯೆನಗಿಕ್ಕದೇನು?
* ಪೊಡವಿಯೇ ಮೈಯಳಿಯೆ, ಮಾಡಲೇನು?

೪

ವಿಶ್ವವನು ತುಂಬಿರುವ
ಈಶ್ವರನೆ ಆಳತೊಡಗೆ,
ಸೈತಿಡಲು, ಸೈಪಿಡಲು, ಬರುವನಾವಂ?
'ಹೇ, ತಂದೆ,' ಎನಲೆನ್ನಸವನೆ ಕಾವಂ?



* ಪ್ರಾಸಕ್ಕಾಗಿ, ಬೇಕಾದರೆ "ಮೈಯಳಿಯೆ ಪೊಡವಿ, ಹಾ! ಮಾಡಲೇನು" ಎಂದೆನಕೊಳ್ಳಬಹುದು!

# ವರದಾನಿ ಗುಡ್ಡಮ್ಮ!

ವಾ ಷ! ವರದಾನಿ ಗುಡ್ಡಮ್ಮ, ಭಕ್ತವತ್ಸಲೆ, ನಿನ್ನ
ಚರಣದರುಶನದಾಸೆಯಿಂದೆ ನಾ ಹಗಲಿರುಳು
"ಬರಬೇಕು ಬರಬೇಕು" ಎಂದು ಹಂಬಲಿಸುತ್ತ
ಕಡೆಗಿಂದು ಬಂದು ನಿನ್ನ ।

ಪರಮಪಾವನ ಮೂರ್ತಿಯನ್ನು ಕಣ್ಣಾರೆ ನೋಡಿ
ಹರುಷದಿಂದೊಡಗೂಡಿ ಭಕ್ತಿಗಿಂಬನು ಮಾಡಿ,
ಹೊರಳುತ್ತಲಿರುತಿಹೆನು ನಿನ್ನಯಡಿಹುಡಿಯಲ್ಲಿ
ಬೆರಗಾಗಿ ತವ ಲೀಲೆಗೆ ॥ ೧ ॥

ಇಲ್ಲಿ ಸುಳಿಯುವ ಗಾಳಿ ಕಲ್ಪತರುವಿನ ಗಾಳಿ,
ಇಲ್ಲಿರುವ ನುಣುಪಾದ ಹಾಸುಗಲ್ಲುಗಳೆಲ್ಲ
ಚಲ್ವವಾಗಿಹ ಹಂಸದುಪ್ಪಳದ ಹಾಸಿಗೆಗ
ಳಿಲ್ಲಿರುವ ಗುಡ್ಡದೊಳಗೆ ।

ಕಲ್ಲು ಕೊರಕಲಿನಲ್ಲಿ ಕಂಡು ಬರುತಿಹ ನೀರು
ಅಲ್ಲಿ ಸಗ್ಗದೊಳಿರುವ ಸೊದೆಯನಣಕಿಸುತಿಹವು!
ಇಲ್ಲಿರುವ ಅನ್ನವದು ರುಚಿಯಾದ ಪ್ರಸಾದವದು !
ತಾಯೆ, ಅದರಿಂದೆ ಜನರು ॥ ೨ ॥

## ಕೋರಿಕೆ.

ಬಾಳುವೆಯ ಕಾಟದಿಂ ಬೇಸತ್ತು, ನಿನ್ನೆಡೆಗೆ
ಮೇಳೈಸಿ ತಪ್ಪದಲೆ ಭಕ್ತಿಯಿಂದಾಗಮಿಸಿ
ಬೀಳಲ್ಕೆ ನಿನ್ನ ಪಾದಂಗಳಿಗೆಯವರ ತನು
ಶಾಂತಿಯನು ತಳೆಯುತಿಹುದು ;

ಮಾಲಿನ್ಯವನು ಕಳೆದು ಮನವು ತಿಳಿಯಾಗುವದು
'ಪಾಲಿಸಮ್ಮಾ!' ಎಂದು ನಿನ್ನ ಸನ್ನಿಧಿಯಲ್ಲಿ
ಕಾಲ ಕಳೆವರು ತಮ್ಮ ದುಃಖಚಿಂತೆಗಳನ್ನು
ಮರೆಯುತ್ತ ಜಗದ ತಾಯೆ ॥ ೨ ॥

ತಿರುಗಲೆಂತಮ್ಮ, ನಾ ನಿನ್ನ ಗುಡಿಯನು ಬಿಟ್ಟು,
ಬರುತಿಹವು ಹೊರಸೂಸಿ ದುಃಖದಿಂ ಕಣ್ಣೀರು !
ಬರಲಾರೆಯೇಂ ತಾಯೆ, ತವ ಮರುಳ ತರಳನಂ
ಮುದ್ದಿಡಲು ಶಾಂತಿಪ್ರದೇ ।

ಇರುತಿರುವೆ ನೀನೆಲ್ಲ ತಳಗಳಲಿ ಎಂದು ಜನ
ಪೊರೆಯುತಿರೆ, ನೀನೇಕೆ ಕಾಣಲೊಲ್ಲೆಯೆ ಅಮ್ಮ!
ಭರದಿಂದ ಬಾರಮ್ಮ, ತೋರಮ್ಮ ಮೊಗವನ್ನು
ನಿನ್ನಳುವ ಕಂದಗೀಗ ॥ ೪ ।

ಚಿತ್ತವಿಲ್ಲಯೆ ಸುಳಿವುದತ್ತ ನಾ ಪೋದರೂ !
ಸುತ್ತಲೂ ನಿನ್ನಯ ಸುಮೂರ್ತಿಗಳೇ ಕಾಣುವವು !

## ಕೋರಿಕೆ.

ಎತ್ತಲೂ ನಿನ್ನ ಸ್ತುತಿಗಾನಗಳೆ ಕೇಳುವವು !
ನಿನ್ನ ಧವಲಿತ ಕೀರ್ತಿಯು ।

ಹತ್ತು ದಿಕ್ಕುಗಳಲ್ಲಿ ಹರಡಿ ಹೊರಚಲ್ಲುವದು !
ಎತ್ತ ನಾಸಿರತಿರುವೆ! ನೀನೆತ್ತ ನೆಲಸಿರುವೆ !
ಮತ್ತೆ ಮತ್ತರಸುವೆನು, ತಿಳಿಯೆ ನಿನ್ನಿರವನ್ನು,
ಕರುಣೆಯೊಂದಿರಲಿ ಜನನೀ ॥ ೫ ॥

---

# ದೇವಮಹಿಮೆಯು.

೧

ಕಣ್ಣು ಸಣ್ಣದಿಹುದು ದೇವ,
ಕಣ್ಣಿನೊಳಗೆ ಕಾಣ್ವ ಶಕ್ತಿ
ಬಣ್ಣಣೆಯನು ಮೀರಿ ಜಗವ
ತುಂಬಿಕೊಂಡಿದೆ!
ಜಗವ ತುಂಬಿಕೊಂಡಿದೆ!

೨

ಕಿವಿಯು ಚಿಕ್ಕದಿಹುದು ದೇವ,
ಕಿವಿಯು ಪಡೆದುಕೊಂಡ ಶಕ್ತಿ
ಭುವಿಯೊಳಿರುವ ದನಿಯನೆಲ್ಲ
ಕೇಳುತಿರುವದು!
ದನಿಯ ಕೇಳುತಿರುವದು!

೩

ರಸನೆ ದೊಡ್ಡದಿಲ್ಲ ದೇವ,
ರಸನೆಯಲ್ಲಿ ಜಗದೊಳಿರುವ
ರಸಗಳನ್ನು ಕಂಡು ಪಿಡಿವ
ದೊಡ್ಡ ಗುಣವಿದೆ!
ದೇವ, ದೊಡ್ಡ ಗುಣವಿದೆ!

೪

## ಕೋರಿಕೆ.

೪

ಎದೆಯು ಚಿಕ್ಕದಿಹುದು ದೇವ,
ಎದೆಯು, ಜಗವ ವ್ಯಾಪಿಸಿರುವ
ಸದಮಲನಹ ನಿನ್ನ ತನ್ನೊ
ಳಿರಿಸ ಬಲ್ಲದು!
ತನ್ನೊಳಿರಿಸ ಬಲ್ಲದು!

೫

ಹೂವು ಚಿಕ್ಕದಿಹುದು ದೇವ,
ಹೂವಿನಲ್ಲಿ ಜಗದ ಜನರ
ಭಾವವರಳಿಸುತಿಹ ಒಳ್ಳೆ
ಕಂಪು ನೆಲಸಿದೆ!
ಒಳ್ಳೆ ಕಂಪು ನೆಲಸಿದೆ!

೬

ಚಿಕ್ಕ ಚಿಕ್ಕ ವಸ್ತುಗಳಲಿ
ಲೆಕ್ಕದಾಚೆ ಶಕ್ತಿಯಿಟ್ಟು
ಅಕ್ಕರಿಂದೆ, ದೇವ, ನೀನು
ಪೂಜ್ಯನಾಗಿಹೆ!
ನೀನು ಪೂಜ್ಯನಾಗಿಹೆ!

# ಭಾವವೇ!



೧

ಮೋಡಗಳ ಮಧ್ಯದಲಿ ಮಿಂಚಿನಂದದಿ ಹೊಳೆಯು
ತೋಡೋಡುತೆಲ್ಲಿಗೋ, ಮರೆಯಾಗುತಿರೆ ನೀನು,
ಬೇಡಿ ಬಗೆ ಬೆರಗಿನಿಂ ನಿನ್ನನೇ ನೋಡುವದು!
ಭಾವವೇ, ಬರಲಾರೆಯಾ? ॥

೨

ಬಿಡದುಬ್ಬಿ ಭೋರ್ಗರೆವ ಕಡಲಲೆಗಳೊಳು ನಿನ್ನ
ಬೆಡಗಿನಡಿಗಳು ಕುಣಿವುದನು ಕಂಡು ಬಗೆ ಹಾರಿ
ಪೊಡಮಡುತ ಬೇಡುವದು ತನ್ನೊಳಗೆ ಕುಣಿದಾಡ
ಲೇನೆನುವೆ ನೀ ಭಾವವೇ? ॥

೩

ಹಕ್ಕಿಗಳ ಕಿರಿಗೊರಲನುಚ್ಚರವದೆಲ್ಲಿಯೋ
ಅಕ್ಕರದ ನಿನ್ನ ಪಡಿನುಡಿಗೇಳಿದಂತೆನಿಸೆ
ಬೆಕ್ಕಸದಿ ಕಿವಿದೆರೆದು ಬಗೆ ನಿನ್ನ ಹುಡುಕುವದು!
ಭಾವನೆಯೆ ಸಿಗಲಾರೆಯಾ? ॥

೪

# ಕೋರಿಕೆ

೪

ಇಲ್ಲಿಯೋ ನಾನಿರಲು ನಿನ್ನಿರವದೆಲ್ಲಿಹುದು?
ಎಲ್ಲಿಯೋ ಮೈದೋರುತೆಲ್ಲಿಯೋ ಮೈಗರೆವೆ!
ಸಲ್ಲಲಿತೆ, ಸವಿಯೆ, ನೀನೊಂದೆ ಸಲವೇ ಬಂದು
ಬಗೆಯುಣಿಸಿ ತಣಿಸು! ತಣಿಸು!!

೫

ನನ್ನಾಸೆ ಜಾಣ್ಮೆಗಳು ನಿನ್ನ ದಾರಿಯ ನೋಡು
ತನ್ನವಿಲ್ಲದೆ ಸಾಯ್ವ ಬಡವನೊಲು ಬಳಲುತಿವೆ!
ಚನ್ನೆಯೇ, ನೀನವಕೆ ಜೀವದಾನವನೀಯು
ಬಂದೆನ್ನ ಬಗೆಯ ಪುಗುತ! ॥

---

# ಸಿಗಬಾರದೇ ?



ಗಿಳಿಗೊಂಚಿ ಚಂಚುವಿಂದೊಡೆದ ಮಾವಿನ ಹಣ್ಣು
ಗಳ ಸರಸ ಧಾರೆಯಿಂ ನೆನೆದು ತಂಪಾಗಿರುವ
ನೆಲದ ಮೇಲ್ಕುಳಿತು, ತಣ್ಣೆಳಲಿಂದೆ ನೇಸರಿನ
ಕದಿರುಗಳ ಮರೆಯ ಮಾಡಿ ।
ಬಳಸಿರ್ದ ಪಯಿರುಗಳ ನಲವಿನಾಟವ ನೋಡಿ,
ಗಿಳಿ ನವಿಲು ಕೋಗಿಲೆಗಳುಲಿಗಳಿಗೆ ಕಿವಿಗೊಟ್ಟು,
ಅಳಿಯ ಹಾಡನು ಕೇಳಿ, ನಲಿಯುತಿಹ ಮಾನವನ
ಸೊಗವೆನಗೆ ಸಿಗಬಾರದೇ ? ॥ ೧ ॥

'ಜುಳುಜುಳಿಂ'ದುಲಿಯುತ್ತ ಸಾಗಿರುವ ಹಳ್ಳದಾ
ಜಲದ ಮಾಧುರ್ಯಕ್ಕೆ ಮನಸೋತು, ಇಬ್ಬದಿಗ-
ಳಲಿ ಬೆಳೆದ ವೃಕ್ಷಗಳು ಬೇರಿನಿಂ ನೀರನ್ನು
ಕುಡಿಕುಡಿದು ಮನದಣಿಯದೆ ।
ತಲೆಯಿಂದೆ ಕುಡಿವಂತೆ, ಬಾಗಿ, ನೀರನು ಮುಟ್ಟಿ,
ಸಲೆ ನೋಟವನು ಬೀರ್ವುದನು ಕಂಡು ಮೈಮರೆದು,
ಅಳಿಯುತಲಿ ಹರುಷದಿಂ ಹಾಡುತಿಹ ಮಾನವನ
ಸೊಗಸೆನಗೆ ಸಿಗಬಾರದೇ ? ॥ ೨ ॥

## ಕೋರಿಕೆ

ಧಾರಿಣಿಯ ತಳದಲ್ಲಿ ತೋರುತ್ತಲಿಹ ಚಮ
ತ್ಕಾರಗಳ, ಪಾತಾಳ ವೈಚಿತ್ರ್ಯಗಳನು, ಮೇ-
ಲೂರ ವೆಗ್ಗಳವನ್ನು, ನವರಸಗಳನುಭವವ,
ಷಡ್ರಿಪುಗಳಾಟವನ್ನು ;

ಮೂರು ಗುಣಗಳ ಮಹಿಮೆಯಂ ನೋಡಿ ಮೇಣ್ಕಾಣ-
ಬಾರದನು ಕಂಡು, ಕೇಳದುದನ್ನು ಕೇಳುತ್ತೆ
ಭೂರಿ ವಿಸ್ಮಯಗೊಳ್ವ ಪುಸ್ತಕದ ಭಕ್ತನಾ
ಸುಖವೆನಗೆ ಸಿಗಬಾರದೇ ? ॥ ೩ ॥

ಅಡವಿಯೊಳಗೇಕಾಂತ ತಾಣಕ್ಕೆ ತಾ ಪೋಗಿ,
ಗುಡಿಸಲೊಂದನು ಕಟ್ಟಿಯದರ ಸುತ್ತಲು ಬಲು ನಿ-
ಬಿಡವಾದ ಮೇಣ್ರಮ್ಯವಾಗಿರುವ ಉದ್ಯಾನ
ವನು ರಚಿಸುತದರೊಳಿರುವ ;

ಗಿಡಗಳಿಗೆ ನೀರುಣಿಸಿ, ಬೆಳೆಯಿಸುತ ತಿಳಿಮನದಿ
ಮೃಡನಡಿಯ ನೆನೆಯುತ್ತ ಮುಕ್ತಿಯನು ಪಡೆಯುತಿಹ
ಕಡು ಜಾಣ ಯೋಗಿಯಾ ಸ್ಥಿರ ಶಾಂತಿ ಸೌಖ್ಯಗಳು
ನನಗಿಂದು ಸಿಗಬಾರದೇ ? ॥ ೪ ॥

ನಿಲವು ನಿಂತಿದೆ ಹೊಲದಿ, ಹಾಲ್ಗಾಳುಗಳಿಗೆ ಮನ
ವೆಳಸಿರಲು, ಸುತ್ತಲಿನ ಹಕ್ಕಿಗಳು ಬಂದು ತೆನೆ

## ಕೋರಿಕೆ

ಗಳ ಮೇಲೆ ಕೂಡ್ರುತಿರೆ, ಬಾನ್ಮಣಿಯು ಮೂಡುತಿರೆ,
ಸುಳಿಗಾಳಿ ಸುಳಿಯುತಿರಲು ।

'ಎಲೆಲೆ, ಹಾ ಹಾ ಹುರ್ರ ಹುರ್ರೆಂ'ದು ಚೀರುತಲಿ
ಬಲವಾಗಿ ಎಸೆಯುತ್ತ ಕವಣೆಗಲ್ಲುಗಳನ್ನು
ಬೆಳೆಯೊಳಗೆ ಹಿಗ್ಗಿನಿಂದಲೆವೊಕ್ಕಲಿಗನುಬ್ಬು
ನನಗಿಂದು ಸಿಗಬಾರದೇ ? ॥ ೫ ॥

ಮುರುಕ ಗುಡಿಸಲೊಳಿದ್ದು, ಹರಕು ಚಿಂದಿಯ ಹೊದ್ದು
ಮರುಕವುಳ್ಳವಳಾಗಿ ಮುರುಕನರಿಯದಳಾಗಿ,
ತಿರುಹುತ್ತ ರಾಟೆಯನ್ನು "ರವತ್ತು ಕೋಟಿಯೀ
ರಾಟೆಯಲ್ಲಿರುವ"ದೆಂದು ।

ಹರುಷದಿಂ ಹಾಡುತ್ತ, ಕಷ್ಟಗಳ ದೂಡುತ್ತ
ಹರಿಸುತ್ತ ಬಡತನವ, ಹಗಲಿರುಳು ನೂಲುತ್ತ
ಲಿರುವ ಸಾಧ್ವಿಯು ಹೋರೆಯಿಂದಿನಿಂದೆನಗನಿಶ
ವೂ ದೇವ, ಸಿಗಬಾರದೇ ? ॥೬॥

ಬಿರುಗಾಳಿ ಸುಯ್ಗುಟ್ಟಿ, ಕಡಲು ಘೋರ್ಗರೆದರುಂ,
ತೆರೆಗಳುರೆ ನೆಗೆಯುತಬ್ಬರಿಸುತಪ್ಪಳಿಸಿಯುಂ,
ಭರದಿಂದ ಹಡಗು ಹೊಯ್ದಾಡಿ ಬಂಡೆಗೆ ಬಡಿದು
ಮೇಲ್ಕೆಳಗೆ ಯಾಗುತಿರಲು ।

ಅರಿಜನರು ಸುತ್ತಣಿಂ ಕಣೆವಳೆಯು ಕರೆವದುಂ
ಮರಣವದು ರೌದ್ರರೂಪದಿ ಮುಂದೆ ನಿಂತರುಂ
ತೊರೆಯದಲೆ ಧೈರ್ಯವುಂ ನಸುನಗುತಲಿಹ ನಾವಿ
ಕನ ಗುಣವು ಸಿಗಬಾರದೇ ॥೭॥

ಬಡವರೊಳಗತಿ ಬಡವನಾಗಿದ್ದರೂ ತಾನು
ಮಿಡುಕದಲೆ, ಮನಮುಟ್ಟಿ ದುಡಿಯುತ್ತ ಹಗಲಿರುಳು।
ಪಡೆಯುತ್ತ ನಿಟಿಲದೊಳಗೆನಿತಿರುವದನಿತನೇ
ತೃಪ್ತಿವಡೆಯುತಲದರೊಳು।

ಹಿಡಿದ ಧರ್ಮವ ಬಿಡದೆ, ಸತ್ಯಶೀಲದಿ ನಡೆದು,
ಪೃಡನಡಿಯನೆಡೆಬಿಡದೆ ಮನದೊಳಗೆ ನೆನೆಯುತ್ತ
ಪ್ರೊಡವಿಯೊಡೆಯನಿಗಿಂತ ಮಿಗಿಲೆನಿಪ ಮಾನವನ
ಮನವೆನಗೆ ಸಿಗಬಾರದೇ ? ॥೮॥

ಜಗವನೆಲ್ಲವನೊಂದೆ ಬಗೆಯಿಂದೆ ನೋಡುತ್ತೆ
ಬಗೆಯ ನುಡಿಯನೆ ಮಾಡಿ, ನುಡಿಯ ದಿಟವನೆ ಮಾಡಿ,
ನಗುತ ಹುಡಿಯೊಳ್ಕುಳಿತು ಮಣ್ಣ ಹೊನ್ನನೆ ಮಾಡಿ
ಹೊನ್ನು ಮಣ್ಣನೆ ಮಾಡುತ।

ಜಿಗಿವಾಸೆಯನು ತೃಪ್ತಿಯೊಳು ಮುಳುಗಿಸುತೆ, ಬಿಸುಟಿ
ತಗಬಗೆಯನನವರತು ಸಂತಸದೊಳಿರುತ ಮಿಗೆ
ಸೊಗಯಿಪೆಳೆ ಮಗುವಿನಾ ಸರಳ ಬಗೆಯಿಂದಿನಿಂ
ಸತತವೂ ಸಿಗಬಾರದೇ ? ॥೯॥

## ಕೋರಿಕೆ

ಅಮ್ಮ ಕನ್ನಡ ತಾಯಿ, ಸಡಗರದೊಳೋಲಾಡಿ
ಯೊಮ್ಮೆ ನೀ ನಲಿಯುತ್ತ ಬೆಡಗುಗೊಳಿಸಿರ್ದ ಮನೆ
ಎಮ್ಮ ಕರ್ನಾಟಕವು ಅಡವಿ ಪಾಲಾಗಿಹುದು
ತಾನೊಡೆದು ಕಳಚಿ ಬಿದ್ದು।

ಸುಮ್ಮನಿರದಿರಲಿ ನಿನ್ನ ಮಕ್ಕಳೆಲ್ಲೊಡಗೂಡಿ
ಹೆಮ್ಮೆಯಿಂದೇಳುತ್ತೆ ಬಿದ್ದಿರುವ ಮನೆಗಟ್ಟು
ತುಮ್ಮಳದಿ ನಿನ್ನನುಳಿಸುವದನ್ನು ಕಾಣ್ವ ದಿನ
ವೆನಗಿಂದು ಸಿಗಬಾರದೇ? ॥೧೦॥



# ನನ್ನ ಬರೆ!

ಕಾರಿರುಳು ಮುಸುಗಿಹುದು! ಜಗವೆಲ್ಲ ಮಲಗಿಹುದು!
ತೋರುವದು ಸುತ್ತಲೂ ಶಾಂತತೆಯೆ ಶಾಂತತೆಯು!
ಹಾರಲ್ಕೆ ಹೃದಯವೊಂದೆಡೆಬಿಡದೆ ಮಲಗಿರುವ
ಕಬ್ಬಿಗನು ಕಣ್ದೆರೆಯುತ ।
ಏರೇರುತಿಹ ಬಗೆಯ ಸರಿಗೊಳಿಸಿ ದೀವಿಗೆಯ
ನೇರಿಸುತ, ನಿರುಕಿಸಲು ಬೆಳಕಿಂಡಿಯೊಳು ತಾನು,
ಜಾರುತಿಹ ತಾರೆಗಳು ಹೇರುತವನೆದೆಯನ್ನ
'ನನ್ನನೇ ಬರೆ' ಯೆನುವವು ॥೧॥

ತಂಗಾಳಿ ತೊನೆಯುವದು! ಮುಂಬಗಲು ಬಂದಿಹುದು!
ಕಂಗಳನ್ನೊರಯಿಸುತೆ ಕಬ್ಬಿಗನು ಕೂರುವನು!
ಅಂಗಣದೊಳಿಹ ಗಿಡದ ಮೇಲ್ಕುಳಿತ ಹಕ್ಕಿಗಳು
ನಲುಮೆಯಿಂ ಚಿಲಿಮಿಲಿಸುತ ।
ನುಂಗುತವನೊಳಬಗೆಯ ಹಾರುತ್ತಲುಬ್ಬಿನಿಂ
ದಂಗಾಂಗಗಳಲಿ ಪುಳಕಾಂಕುರವ ಪುಟ್ಟಿಸುತೆ
ಇಂಗಿಹುದೆ ನಲುಮೆಸೆಲೆ? ಏಳೇಳು ಕಬ್ಬಿಗನೆ
'ನನ್ನನೇ ಬರೆ' ಯೆನುವವು ॥೨॥

## ಕೋರಿಕೆ

ಮೂಡುವನು ನಿಸಿವಗೆಯು ಮೂಡಣದ ದಿಕ್ಕಿನಲಿ!
ಹಾಡುತ್ತ ಕಬ್ಬಿಗನು ಹೊರಬಿದ್ದು ಹೋಗುವನು!
ತೀಡುತಿಹ ಗಾಳಿಯೊಳು ನರುಗಂಪನುರೆ ಬೀರಿ
ನಗುತಲಿರುವಲರೋಳಿಯು ।
ಬಾಡಿರುವ ಬಗೆ ಬಿಟ್ಟು ಕೂರ್ಮೆಯಿಂದಾಡುವೆವು!
ನೋಡು, ನೋಡಿತ್ತ ನೀ ಸುಮ್ಮನೇಕೋಡುತಿಹೆ?
ನಾಡೆ ಸೌಸವವೀವ ಸಂತಸದ ಬೀಡಾದ
'ನಮ್ಮನೇ ಬರೆ' ಯೆನುವದು ॥೨॥

ನಡುವಗಲು ಬಂದಿಹುದು! ನೇಸರಿನ ಕದಿರುಗಳು
ನಡುತಿಹವು ನೆಟ್ಟಗೇ ಮಾನಿಸರ ನೆತ್ತಿಯಲಿ!
ಜಡಸೃಷ್ಟಿ ಸುಮ್ಮನೇ ನಿಂತಿಹಳು ಬಿಸಿಲಿನೊಳು!
ಸುಳುಹಿಲ್ಲ! ಸಪ್ಪಳಿಲ್ಲ!
ಸೊಡಬಲಿಯೊಳಲೆಯುತಿಹ ಕಬ್ಬಿಗನ ಬಗೆಯು ಮರು
ಳ್ಪಿಡಿದಂತೆಯಾಗಿರಲು, ಸಾವಿನೊಲು ನಿಲ್ಲುವನು!
ಹೊಡೆಯುತಿರೆ ಹೃದಯವೊಂದೆಡೆಬಿಡದೆ ಜಡ ಸೃಷ್ಟಿ
'ನನ್ನನೇ ಬರೆ' ಯೆನುವಳು ॥೪॥

ಇಳಿಹೊತ್ತು ಕಳೆದೋರೆ ಮನೆಬಿಟ್ಟು ಕಬ್ಬಿಗನು
ಹೊಲದೊಳಗೆ ಹೋಗುವನು! ಸುತ್ತಲೂ ನೋಡುವನು!
'ಇಳಿವಿಸಿಲಿನೊಳು ಹಾರುತಿಹ ಹಕ್ಕಿಗಳ ಹಿಂಡು
ನಿನಿದನಿಯೊಳುರೆ ಬೆರೆಯುತ!

ಸುಳಿಗಾಳಿಯೊಯ್ಯನೊಯ್ಯನೆ ಬೀಸಲದರಿಂದೆ
ತಲೆಹಾಕಿ ಮುರುಕ ಮಾಡುತಲಿಳೆಗೆ ಮಣಿದೇಳು
ತೊಲುವೆಯಿಂ ನಲಿನಲಿವ ಹಚ್ಚನ್ನ ಪಯಿರುಗಳು
'ನನ್ನನೇ ಬರೆ' ಯೆನುವವು ॥೫॥

ಬೆಳದಿಂಗಳೆಲ್ಲೆಡೆಯೊಳುಕ್ಕಿಹುದು! ಕಬ್ಬಿಗನು
ಹೊಳೆಯ ದಡದಲಿ ನಿಲಿಸಿರುವ ಚಿಕ್ಕ ನಾವೆಯಲಿ
ಕುಳಿತು ಚಕ್ಕಂದದಿಂ ಹುಟ್ಟ ಕಡಿಯುತೆ ನೀರಿ
ನಾಟವನ್ನಾಡುತಿರಲು ।

'ಸುಳುಸುಳಿಂ' ಬುಲಿಗೇಳಿ ಸುಮ್ಮನೇ ನಿಲ್ಲುವನು!
ತೊಳಗುತಿಹ ಚಂದಿರನು . ತಲೆಯನ್ನು ಸೆಳೆಯುತಲಿ,
'ಜುಳುಜುಳನೆ' ಹರಿಯುತಿಹ ಹೊಳೆಯು ಜಗ್ಗುತಲೆದೆಯ,
'ನನ್ನನೇ ಬರೆ' ಯೆನುವವು ॥೬॥

ಮುಡಿ ಸಡಿಲಿ ಮುಡಿಯಿಡಿದ ಮುಂಗುರುಳು! ಕಂಬನಿಯ
ಮಿಡಿದು ಕೆಂಪಾಗಿರುವ ಕಣ್ಣುಗಳು! ಬೆಸನದಿಂ
ದಡದಡನೆಯದರುತಿಹ ತುಟಿಜೋಡು! ಕಳೆಗುಂದಿ
ಕಂದಿರುವ ಮುಖಬಿಂಬವು!
ಮಿಡುಕುತಿಹ ಮನವು! ನೀರನ್ನಂಗಳಿಲ್ಲದಲೆ
ಬಡಕವಾಗಿಹ ದೇಹ— ಪತಿವಿರಹಿಣಿಯ ನೋಡಿ

**ಕೋರಿಕೆ**

ದೊಡನವಳ ಪ್ರೇಮವದು ಕಬ್ಬಿಗನ ಬಗೆ ಸೇರಿ
'ನನ್ನನೇ ಬರೆ' ಯೆನುವದು! ॥೭॥

ಜುಡುಪಾದ ಪರ್ವತದ ತುದಿಯ ಮೇಲ್ನಿಲ್ಲುವನು!
ಕಡಲೊಂದು ಕೆಳಗಿಳೆಯೊಳಲೆಗಳಿಂದೊಪ್ಪುವದು
ಬೆಡಗಿನಿಂ ಕೂಡಿರುವ, ಮೇಲೊಂದು, ಮೇರೆಯಿ
ಲ್ಲದ ಮುಗಿಲು ಮೆರೆಯುತಿಹುದು!
ಸಡಗರದ ಪಟ್ಟಣಗಳಿದ್ದಿರುವ ಬೆಟ್ಟಗಳು
ಕಡು ಪೆಂಪ ತಾಳ್ದಿಹವು! ಕಂಡನಾ ಕಬ್ಬಿಗನು!
'ಒಡೆಯನಾನಿವಕೆಲ್ಲ ನನ್ನನೇ ಬರೆ' ಯೆಂಬ
ನುಡಿಗೇಳಿ ಬೆರಗಾದನು! ॥೮॥

'ಮಗುವೆ ಇದ್ದಿಹ ಮಕ್ಕಳೆಲ್ಲ ಪರಪೆಣ್ಗಳಿಗೆ
ಬಗೆ ಸೋತು ನನ್ನನೇ ಮರೆತಿಹರು ಅಲ್ಲ! ಇ-
ನ್ನಗಲಿದರ ಮಾತ ತೆಗೆದೊಡೆಯುಳುವು ಪೆರ್ಚುವದು!
ಮಾಡಲೇಂ ಗತಿಗೇಡಿಯು!
ದುಗುಡವದು ಕಾಡುವದು! ಕೈಕಾಲ ತುಂಡರಿಸಿ
ಯೊಗದಿಹರು ಕಲ್ಲೆಡೆಯ ಕಟುಕರಕಟಕಟ! ಹಾ!
ಮಗುವೆ, ಇಂತೆನ್ನ ಬರೆ' ಯೆಂದೆನಲು ಕರುನಾಡು,
ಕಬ್ಬಿಗನು ಹಾ! ಎನುವನು ॥೯॥

---

# ಏನು?



ಸೊಗದೊಳಗೆ ಮಲಗಿದೆಳೆ
ಮಗುವಿನಾ ಮೊಗದೊಳಗೆ
ಮುಗುಳುನಗೆಯುಲಿ ನೀನು
ನಗುತಲಿಹೆಯೋ?—ಅದಕೆ
ನಗಿಸುತಿಹೆಯೋ? ॥೧॥

ಅರಳಿರುವ ಬೆಳಗಿನಲಿ
ನರುಗಂಪನುರೆ ಬೀರ್ವ
ಅರಳುಗಳನೊಳಸೇರಿ
ಅರಳುತಿಹೆಯೋ?—ಅವುಗ
ಳರಳಿಸುವೆಯೋ? ॥೨॥

ಹಕ್ಕಿಗಳ ಕಿರಿಗೊರಲ
ಹೊಕ್ಕು, ಜಗ ಮೈಮರೆಸಿ
ಯಕ್ಕರದಿ ನುಣ್ಚರದಿ
ಹಾಡುತಿಹೆಯೋ?—ಅವನೆ
ಹಾಡಿಸುವೆಯೋ? ॥೩॥

## ಕೋರಿಕೆ

ಮುಗಿಲೊಳಗೆ ನೀ ನಿಂತು
ಬಗೆಬಗೆಯ ಬಗೆಗಳಿಂ
ಮುಗಿಲಾಗಿ ಕೆಳಜಗವ
ನೋಡುತಿಹೆಯೋ?—ಮುಗಿಲ
ನೋಡಿಸುವೆಯೋ? ||೪||

ತೊರೆಯೊಳಗೆ ಬೆರೆತು ಬಗೆ
ಕರಗಿಸುವ ಸರಗೈದು
ತಿರುಗುತಿಹ ಸೃಷ್ಟಿಯನು
ನಿಲಿಸುತಿಹೆಯೋ?—ನೀನೆ
ನಿಲುತಲಿಹೆಯೋ? ||೫||

ಎದೆಗೊಳದಿ ಪದುಳದಿಂ
ಹುದುಗಿ ನೀ ವಿಧವಿಧದ
ಚದುರಿನಲೆಯುಲೆಯಾಗಿ
ಏಳುತಿಹೆಯೋ?-ಅಲೆಯ
ನೆಬ್ಬಿಸುವೆಯೋ? ||೬||

ತಾರೆ ಶಶಿ ರವಿಗಳಲಿ
ಸೇರಿ ನೀನನವರತ
ಧಾರುಣಿಯನೆಲ್ಲವನು

ಬೆಳಗುತಿಹೆಯೋ?–ಅವನೆ
ಬೆಳಗಿಸುವೆಯೋ? ॥೭॥

ಇಳೆಯನ್ನು ವ್ಯಾಪಿಸುತ
ಮಳೆಗಾಳಿ ಬೆಳೆಯಾಗಿ
ಯೊಲುಮೆಯೊಳು ಸಲಹಲ್ಕೆ
ಬರುತಲಿಹೆಯೋ?—ಅವನೆ
ಬರಿಸುತಿಹೆಯೋ? ॥೮॥

“ಕಾಯುತಲಿ ಕುಳಿತಿಹೆನು
ಬಾ ಎನ್ನ ಮಗು” ವೆನುತ
ತಾಯಿಯೆದೆಯೊಳು ಕುಳಿತು
ಒದರುತಿಹೆಯೋ?—ಅವಳ
ಒದರಿಸುವೆಯೋ? ॥೯॥

ಮೊದಲಿನಿಂ ತುದಿವರೆಗು
ಇದನೆಲ್ಲವನು ನೀನು
ಹದುಳದಿಂದೆದೆ ಸೇರಿ
ಒರೆಯುತಿಹೆಯೋ?—ಏನು
ಒರೆಯಿಸುವೆಯೋ? ॥೧೦॥

---

# ಉಪಕಾರವೇ?



ತರುವಿನೊಳು ಹಣ್ಣಾಗಿ, ಹೂವಿನೊಳು ಕಂಪಾಗಿ,
ತೊರೆಗಡಲು ಮುಗಿಲಿನೊಳು ಹರಿವ ಜೀವನವಾಗಿ,
ಧರೆಗೆಲ್ಲ ಬೆಳಕಾಗಿ ಬಿಸಿಗದಿರನೊಳು, ಸೊದೆಯ
ಹೊನಲಾಗಿ ತಿಂಗಳಿನೊಳು।

ಎರಲೊಳಗೆ ಜೀವಿಗಳ ಜೀವಾಳವೇಯಾಗಿ
ತಿರೆಯೊಳಗೆ ತರತರದ ಬೆಳೆಯಾಗಿ, ಮತ್ತೆ ದೇ-
ವರ ದೇವನೇ ನೀನೆ, ನೀನೆಯಾ ದೇವನಹ
ನಿಷ್ಕಾಮ ಉಪಕಾರವೇ ॥೧॥

ಇಳೆಯೊಳಗದೆಲ್ಲಿಯೋ ಮರುಕ ದಯೆಯೌದಾರ್ಯ-
ಗಳ ರೂಪಿನಿಂದೆ ಕೆಲ ಸಾಧುಸಜ್ಜನಕರುಣೆ-
ಗಳ ಬಳಸಿ ಸುಳಿವ ನೀನೆಲ್ಲೆಡೆಯೊಳೆಲ್ಲರೊಳ-
ಗೇಕೆ ತಲೆದೋರಲಿಲ್ಲ?

ತಲೆದೋರಿ, ಹೊಳೆಯುತ್ತ ದುಃಖದಾರಿದ್ರ್ಯಗಳ
ನಿಲದಂತೆಯೋಡಿಸುತ ಸತ್ಯಸುಖಶಾಂತಿಯಿಂ
ದಿಳೆಯಿದನು ತುಂಬುತಲಿ ಬೆಳಗುತಿಹ ಸಗ್ಗವ-
ನ್ನೇಕೆ ನೀನೆಸಗಲಿಲ್ಲ? ॥೨॥

ಕೋರಿಕೆ.

ಬೆಲೆಗೇಡಿ ಬಲಸ್ವಾರ್ಥಿ ವಂಚಕರು ನಿನ್ನ ಬಹು
ಬೆಲೆ ಬಾಳ್ವ ಹೆಸರಿನಿಂ ಸ್ವಾರ್ಥ ಸಾಧಿಸುತಕಟ!
ತಿಳಿಯವಿಹ ಬಡಜನರ ಗೋಣ್ಮುರಿದು ಕೊಲೆಮಾಡು-
ತಿರುವದನು ನೋಡು! ನೋಡು!!

ಕೊಲುವದನು ನೋಡಿ ನೀ ಬಲುಮೆಯಿಂದವರೆದೆಯ-
ನೊಳಪೊಕ್ಕು, ಹೊರದೂಡಿ ಹೊಲಸುತನವನು, ಬಗೆಯ
ತೊಳೆಯುತ್ತ ಸರಿಗೊಳಿಸಿಯವರನ್ನು ಸಾಧುಸ-
ಜ್ಜನರನ್ನು ಮಾಡು! ಮಾಡು!! ॥೩॥

ಬೆರೆಯುತಲಿ ಈ ಸೃಷ್ಟಿ ರೋಮರೋಮಗಳಲ್ಲಿ
ಹರಿಯುತಿಹ ಉಪಕಾರವೇ ನೀನು ಕರುಣದಿಂ
ಹರಿದೊಡನೆಯೆಲ್ಲ ಜನಮನಗಳಲಿ, ನಿನ್ನ ಹೆ-
ಚ್ಚಳಕೇನು ಕುಂದಿರುವದು?

ಕರಿಗತ್ತಲೆಯು ಜಗದೊಳಿರಲು ಬೆಳಕಿಗೆ ಬೆಲೆಯು
ಬರುವದೆಂಬೀ ನುಡಿಗೆ ಯಾಸರವನೀಯದಿರು!
ತ್ವರೆಮಾಡು! ತ್ವರೆಮಾಡು!! ಹರಹು ನಿನ್ನಯ ಮಿರುಗು-
ತಿಹ ಬೆಳಕನೀಜಗದೊಳು ॥೪॥

ಬೇಡುವೊಡೆ ಬೇಡು ನಿಷ್ಕಾಮೋಪಕಾರಿಯನು,
ಕಾಡುವೊಡೆ ಕಾಡು ನಿಷ್ಕಾಮೋಪಕಾರಿಯನು,

**ತೋಡಿ**

ಕೂಡುವೊಡೆ ಕೂಡು ನಿಷ್ಕಾಮೋಪಕಾರಿಯನು,

ಹಗಲಿರಳು ಸೇವೆಯನ್ನು।

ಮಾಡುವೊಡೆ ಮಾಡು ನಿಷ್ಕಾಮೋಪಕಾರಿಯದು,

ಹಾಡುವೊಡೆ ಹಾಡು ನಿಷ್ಕಾಮೋಪಕಾರಿಯನು,

ಮೂಡುವೊಡೆ ಮೂಡು ನಿಷ್ಕಾಮೋಪಕಾರಿಯಲಿ

ಆ ದೇವನಲ್ಲಿ ಮನವೇ ।೫॥

---

# ಕುರುಡ.



೧

ಕುರುಡಾಗಿ ಮರುಗುತಿರುವೆ!
ಹರಹರನೆ!
ಕುರುಡಾಗಿ ಕೊರಗುತಿರುವೆ॥
ಕತ್ತಲೆಯೆ ಕತ್ತಲೆಯು. ಕತ್ತಲೆಯೆ ಕತ್ತಲೆಯು!
ಸುತ್ತಿಹುದು ಎತ್ತೆತ್ತಲೀಕ್ಷಿಸಿದೊಡುತ್ತತ್ತ!
ಮುತ್ತಿಹುದು ಒಳಹೊರಗು! ಹತ್ತಿಹುದು ಮೇಲ್ಕೆಳಗು!
ಸತ್ತಿರುವೆ ಜೀವಿಸಿಯು! ಸತ್ತು ನಾ ಜೀವಿಸುವೆ!
ಕತ್ತಲೆಯೆ ಜಗವಾಗಿದೆ!
ಹಾ! ದೇವ,
ಜಗವೆ ಕತ್ತಲೆಯಾಗಿದೆ॥

೨

ಕಣ್ಣಿನಿಂ ಬಗೆಯೋಡಿ, ಕಣ್ಣಿನಿಂ ಜಗ ನೋಡಿ,
ಕಣ್ಣಿನಿಂ ಸೊಗ ಕಂಡು, ಕಣ್ಣಿನಿಂ ಸೊಗಸುಂಡು,
ಕಣ್ಣಿನಿಂ ಬೆಳಕಿಡಿದು, ಕಣ್ಣಿನಿಂ ಚಲುವಡೆದು,
ಕಣ್ಣಿನಿಂದೆಲ್ಲವೂ, ಕಣ್ಣೊಳಗೆಲ್ಲವೆನೆ
ಜೀವವೇ ಭಾವವಾಯ್ತು!

ಭಾವಿಸಲು,

ಭಾವವೇ ಜೀವವಾಯ್ತು! ॥

೩

ಇಂತಿರುವ ಕಣ್ಣನೇ ಕಳಕೊಂಡು ನಾನಿಂದು

ಭ್ರಾಂತಿವಡೆದಳುತಿರುವೆ ಗಳಗಳನೆ ಬಗೆನೊಂದು!

ಚಿಂತೆಯಿಂ ಕುರುಡ! ನಾ ದಿಟವಾಗಿಯೂ ಕುರುಡ!

ಸಂತಸದಿ ನಾನಂದು ದಿಟ್ಟಿಸಿದ ನೋಟಗಳು

ಕರಿಪಟದ ಮೇಲ್ದೋರುವ

ಚಿತ್ರದೊಲು

ತಿರುಗುವವು ಹೇ ಶಿವಶಿವಾ!

೪

ಹರುಷದಿಂ ನಿರುಕಿಸುತ ತಣಿಯಬೇಕೆಂದೆಣಿಸಿ

ಧರೆಯನಿದನೆಲೆ ದೇವ, ನಿರ್ಮಾಣ ಮಾಡಿರುವೆ!

ಮೆರೆಯುತಿಹ ಸರಸವಹ ಹರುಷವಹ ನೋಟಗಳ

ನಿರುಕಿಸುತ ನಿನ್ನಂತೆ ಹರುಷಗೊಳಬೇಕೆನಲು,

ಕುರುಡನಾಗಿರುವೆನಲ್ಲ!

ಅಕಟಕಟ!

ಮರುಳನಾಗಿರುವೆನಲ್ಲ!

೫

ಮಾರಹರ, ಜಗದೊಳಗೆ ಕಣ್ಣಿನಿಂ ನೋಡಲ್ಕೆ

ಬಾರದಿಹ ನೋಟಂಗಳುಂಟೇನು? ಕೇಳಲ್ಕೆ

# ಕೋರಿಕೆ.

ಬಾರದಿಹ ವಚನಂಗಳಿರುವವೇ ನುಡಿಯಲ್ಕೆ?
ಬಾರದಿಹ ಶಬ್ದಂಗಳಿರುತಿಹವೆ? ಇದ್ದಿರಲು,
ಕಣ್ಣು ಕಿವಿ ಬಾಯಿಗಳನು
ಹೇ ದೇವ,
ಇಲ್ಲದೊಲು ಮಾಡು ನೀನು!

೧

ನೀನು ಪರಿಪೂರ್ಣನಿರೆ ನಿನ್ನ ಸೃಷ್ಟಿಯದೆಂತು
ಹೀನವಹುದೆಂತ ಪರಿಪೂರ್ಣವಹುದರಿಯೆನೇ?
ಜಾನಿಸಲ್ಕೆಲ್ಲವೂ ನನ್ನದೇಯಪರಾಧ!
ಮಾನನಿಧಿ ಜಗದ ಸೊಗವೇ ನಿನ್ನ ಹೆಬ್ಬಾಸೆ!
ನಾನು ಗೈದಿರುವದನ್ನು
ತಪ್ಪದಲೆ
ನಾನೆ ಯುಣ್ಣುತಲಿರುವೆನು!

೨

ಹೊರಗಣ್ಣು ಮುಚ್ಚಿರಲು, ಒಳಗಣ್ಣು ತೆರೆಯುವದೆ?
ತೆರೆದು ತನ್ನೊಳಗಿರುವ ಬೆಳಕನ್ನು ನಿರುಕಿಪುದೆ?
ನಿರುಕಿಸುತ ಹೊರಗಿರುವ ಬೆಳಕನ್ನು ಮರೆಯುವದೆ?
ಮರೆಯುತಲಿ ತನ್ನೊಳಿಹ ಬೆಳಕಿನೊಳು ಬೆರೆಯುವದೆ?
ಬೆರೆಯುವೋಲೊಳಬೆಳಕದು
ಹೊರಬೆಳಕಿ
ನಿಂದೆ ಬಲು ಚಲುವಿರುವದೇ?

---

# ಕಾಲಲೀಲೆ.

೧

ಕಬ್ಬಿಣವು ಓಡುತಿದೆ! ಕಟ್ಟಿಗೆಯು ಹಾಡುತಿದೆ!
ಅಬ್ಬಬ್ಬ! ಗಾಳಿ ಮಾತಾಡುತಿಹುದು!
ನೀರು ನೆಲವಾಗಿಹುದು! ನೆಲವು ಮನೆಯಾಗಿಹುದು!
ಧಾರಿಣಿಯೊಳೆನಿತೆನಿತು ವೈಚಿತ್ರ್ಯವು!

೨

ಮುಗಿಲೊಳಗೆ ಜಗವಾಡಿ, ಜಗದೊಳಗೆ ಮುಗಿಲಿಳಿದು,
ಸೊಗಸಾದ ಸುದ್ದಿಯನು ಸಾರುತಿಹವು!
ಬಗೆಬಗೆಯ ಭಾವಗಳ ಬೀರುತಿಹ ಚಿತ್ರಗಳು
ಬಗೆ ಸೆಳೆದು, ಲಗಬಗೆಯೊಳಲೆಯುತಿಹವು!

೩

ಮಿಂಚು ಸೆರೆಯಾಗಿ ಪ್ರಪಂಚವನೆ ಪಲ್ಲಟಿಸಿ
ಸಂಚಿತದ ಕಾರ್ಯಗಳನೆಸಗುತಿಹುದು!
ಕಾಂಚನವು ಮಿಂಚಿನೆಡೆ ಬೇಗದಿಂ ಸಾಗುತ ವಿ-
ರಂಚಿಯನೆ ಬೆರಗಿನೊಳು ನೂಕುತಿಹುದು!

# ಕೋರಿಕೆ

೪

ಕುಳಿತಲ್ಲಿ ಜಗಬಂದು ಸುದ್ದಿಯನು ಪೇಳುತಿದೆ!
ಇಳೆಯಾಟವೆಲ್ಲವೂ ತೋರುತಿಹುದು!
ಮಂತ್ರಗಳು ಮೋಣಿಂದ್ರ ಮಾಹೇಂದ್ರ ಜಾಲಗಳ
ತಂತ್ರಗಳು ಸೇರಿಹವು ಯಂತ್ರಗಳಲಿ!

೫

ಇಬ್ಬಣವು ತಮ್ಮೊಳಗೆ! ನಿಬ್ಬಣವು ಹೆರವರಿಗೆ!
ಹಬ್ಬವಿಂದುಬ್ಬೆಗದೊಳಬ್ಬರಿಪುದು!
ಮಬ್ಬು ನಿಬ್ಬರವಾಯ್ತು! ಕೊಬ್ಬಿನುಬ್ಬರವಾಯ್ತು!
ದಬ್ಬಾಳಿಕೆಯು ದೇವ, ತಬ್ಬುತಿಹುದು!

೬

ತಿರ್ರನೇ ತಿಗರಿಯೊಲು ತಿರುಗುತ್ತಲಿಹ ಹೊತ್ತು
ಬಿರ್ರನೇ ಬೀಸುವದೆ ಹೊಸ ಉಸಿರನು?
ಮರೆಮಾಡುತೀಗಿರ್ಪ ಭೀಕರದ ನೋಟಗಳ
ಮಿರುಗುತಿಹ ದೃಶ್ಯಗಳ ತೋರ್ಪುದೇನು?

೭

ಒದಗಿರ್ದ ಬಗೆಗಳನು ಭೂತದೊಳು ಮರೆಮಾಡಿ,
ಹುದುಗಿರ್ದ ಬಗೆಗಳನು ಬೆಳಕಿನೊಳಗೆ
ಮುದದಿಂದೆ ತಂದು, ಹೊಸ ಹದನವನು ಹುಟ್ಟಿಸುವ
ದಿದು ನೋಡು! ಇದು ನೋಡು ಕಾಲಲೀಲೆ!

---

# ನಾವಿಕನು.

೧

ನೌಕೆಯಾಚೆಯು ದಡದಿ!
ನಾನು ಈಚೆಯು ದಡದಿ!
ನಡುನೆ ಭೋರ್ಗರೆಗರೆದು ಹರಿವ ನೆರೆಯು
ಕಡೆಹಾಯ್ಸುವಂಬಿಗನ ಸುಳುಹನರಿಯೆ!

೨

ಬಿರುಗಾಳಿಯಿಂದುಬ್ಬಿ,
ಹೊಸ ನೀರಿನಿಂ ಕೊಬ್ಬಿ,
ಸಿಕ್ಕಿರುವ ಜೀವಿಗಳ ತಳಗಾಣಿಸಿ
ಲೆಕ್ಕಿಸದೆ ಹೊಳೆ ಹರಿವುದಿಳೆ ತೇಲಿಸಿ!

೩

ಗಿಡಬಿಟ್ಟು ರಣಹದ್ದು
ಕಾಗೆಗಳು ನೆಗೆದೆದ್ದು
ಮುತ್ತುತಲಿ ನೆತ್ತಿಯನು ಕುಕ್ಕುತಿಹವು!
ಬಿತ್ತರದಿಯಂಜಿಕೆಯನುಕ್ಕಿಸುವವು!

## ಕೋರಿಕೆ.

೪

ಗುಡುಗುಮಿಂಚುಗಳೊಡನೆ
ಬಲ್ಸರಿಯು ಜಡಿದೊಡನೆ
ಮನವು ದಿಕ್ಕಿಲ್ಲದಿಹ ಹಕ್ಕಿಯಂತೆ
ಕಣ್ಬಿಟ್ಟು ಸೊಗವರಸುತಿಹುದು ಸೋತು !

೫

ಬುಸುಗುಡುವ ಬಿರುಗಾಳಿ
ನದಿನೀರಿನೊಳು ತೇಲಿ
ಬರುತಿರುವ ನಾವೆಗಳ ಹಾರಿಸುವದು !
ತೊರೆಯೊಳಗೆ ಮುಳುಗಿಸುತ ಜಾರಿಸುವದು !

೬

ತಿರುಗುಣಿಯ ಮಡುವಿನಲಿ
ತಿರುತಿರುಗಿ ಹರಗೋಲು
ಬುಡಮೇಲು ತಾನಾಗಿ ಮುಳುಗುತಿಹವು !
ಪಡಕಾಣದಲೆ ಕೆಳಗೆ ಇಳಿಯುತಿಹವು !

೭

ಮುಂದಿನದು ಮರೆಯಾಗಿ
ಹಿಂದಿನದು ಮಂಜಾಗಿ
ಆವರ್ತದೊಳು ಸಿಕ್ಕು ತಿರುತಿರುಗುತ
ತಿರುತಿರುಗಿ ಬೇಸರಿಯುವವು ಬಳಲುತ !

೮

ಇಂತಿರುವ ನೆರೆಯನ್ನು
ಎಂತು ನಾ ದಾಂಟುವೆನು?
ನಾವೆಯನು ಕಂಡು ಬಗೆ ಹರಿಯುತಿಹುದು!
ನಾವಿಕನ ಕಾಣದಲೆ ಮರುಗುತಿಹುದು!

೯

ಆ ದಡದಿ ಚಲ್ಲಾಟ!
ಈ ದಡದಿ ಮಿಡುಕಾಟ!
ಅಲ್ಲಿರುವದುಮ್ಮಹದ ಬನದ ಸಿರಿಯು!
ಇಲ್ಲಿರುವದುಮ್ಮಳದ ಮುಳ್ಳುಕೊರೆಯು!

೧೦

ದಾಟಿಹೋದವರೆಲ್ಲ
ಕೋಟಲೆಯ ತೊರೆದಲ್ಲಿ
ಗುರಿಮುಟ್ಟಿ ಚಿರಶಾಂತಿ ಸುಖಗಳಲ್ಲಿ
ಒರಗಿ ನಗುನಗುತಿಹರು ಹರುಷದಲ್ಲಿ!

೧೧

ನಾವೆಯೀಚೆಯ ದಡಕೆ
ಬರುವಾಸೆಯದು ಮನಕೆ
ತೋರದಲೆ ಬಳಲಿಕೆಯೆ ತೂಗುತಿಹುದು!
ಕರೆಕರೆಯ ಪಡುತ ಬಗೆ ಬಾಗುತಿಹುದು!

## ಕೋರಿಕೆ

೧೨

ಕುಳಿಕುಳಿತು ಬೇಸತ್ತು
ಕಡೆಗೆ ಬೇಡುವೆನತ್ತು,
"ತೋರದಿಹ ನಾವಿಕನೆ, ದಯದೋರುತ
ಬಾರ ಕಡೆಹಾಯ್ಸು ಕಂಬನಿಯೊರಸುತ!

೧೩

ಕೊನೆಯಿಲ್ಲ ನೆಲೆಯಿಲ್ಲ
ಈ ಭವದ ಕಡಲಲ್ಲಿ
ಬಹುದೂರ, ಬಹುದೂರ, ಆಚೆ ದಡದಿ
ತವ ದಯದ ನಾವೆಯದು ತೇಲಿ ಬಿಟದಿ

೧೪

ದೇವನೇ, ನೀನಿಂದು
ನಾವಿಕನೆ ಐತಂದು
ಕರುಣ ನಾವೆಯ ನೂಕುತೆನ್ನಯೆಡೆಗೆ
ತ್ವರೆಮಾಡಿ ಕಡೆಹಾಯಿಸಾಚೆ ತಡಿಗೆ



# ಕಬ್ಬಿಗನಾಟವು.

೧

ಕಬ್ಬಿಗನಾಟವನಾಡುವನು !!

ಖರಕರ ಹಿಮಕರ ರಕ್ಷಿಯೊಳಿರಿಸಿ
ಶಿರದೊಳಗಾಗಸ ಗಂಗೆಯ ಧರಿಸಿ
ಧರೆಯನು ಹೃದಯದಿ ತಿರುಗಲು ಬಿಟ್ಟು
ಪಾತಾಳಕೆ ತಾನಡಿಗಳನಿಟ್ಟು

ಕಬ್ಬಿಗನಾಟವನಾಡುವನು !!

೨

ಕಾಲಾಶ್ವವ ತಾನೇರುತ ಕುಣಿಸಿ
ಮೂಲೋಕಗಳನ್ನೊಂದೆಡೆ ಬರಿಸಿ
ಮಾಟದ ಕೋಲನು ಕೈಯಿಂ ತಿರುಹಿ
ಲೀಲಾ ಜಾಲವ ಪಸರಿಸಿ ಸರಿದು

ಕಬ್ಬಿಗನಾಟವನಾಡುವನು !

೩

ಸರಿಸುತ ಯುಗಯುಗಗಳ ತೆರೆಯನ್ನು
ಹರಿಯಿಸಿ ಚಣದೊಳಗಚ್ಚರಿಯನ್ನು

## ಕೋರಿಕೆ

ಬೆರೆಯಿಸಿಯದರೊಳು ಜನಮನವನ್ನು
ಧರೆಯನು ಸೆರೆಯಾಗಿಸಿ ತಾ ಮೆರೆದು
ಕಬ್ಬಿಗನಾಟವನಾಡುವನು!

೨

ವಿಶ್ವವ ನವರಸರುಚಿಯಲಿ ತೊಳೆದು
ಅಣುರೇಣುಗಳಲಿ ಸುಲಭದಿ ಸುಳಿದು
ಪೃಥ್ವಿಯ ಮೇರೆಯ ಮೀರುತ ಬೆಳೆದು
ನೋಡುವ ಮನುಜರ ಸ್ಮೃತಿಯನು ಕಳೆದು
ಕಬ್ಬಿಗನಾಟವನಾಡುವನು!

೩

ನುಡಿಯುವ ಜನರನು ಮೂಕರ ಮಾಡಿ
ಮೂಕತೆಯಲಿ ನುಡಿಯಾಗುತೆ ಮೂಡಿ
ಕಣ್ಣುಗಳೀಕ್ಷಿಸದಾಟವ ಹೂಡಿ
ಕಿವಿಬಗೆ ಕೇಳದ ಗಾನವ ಮಾಡಿ
ಕಬ್ಬಿಗನಾಟವನಾಡುವನು!

೪

ಚಾಚುತ ಬಾನ್ಗೆ ಬಗೆಯ ರಸನೆಯನು
ತೂರುತ ತಾರಾಕಂದುಕಗಳನು
ಬಾರಿಸಿ ಬ್ರಹ್ಮಾಂಡದ ಭೇರಿಯನು
ಥೈಥೈ! ಥೈಥೈ!! ದಣಿಯದೆ ಕುಣಿದು
ಕಬ್ಬಿಗನಾಟವನಾಡುವನು ।

# ಮೌನ.

೧

ಲೀಲೆಯಿಂ ಪೆರ್ಮಡುವಿ-
ನಾಳವಿಹ ಕೇಳಿಯೊಳಗೆ
ಕಾಲಿಟ್ಟ ಮೌನವೇ, ಬಾರ!

೨

ಎರಲ ಮೇರೆಯ ಮೀರಿ,
ಮೆರೆವ ಗ್ರಹಗಳ ಹಾರಿ,
ಒರಗಿರುವ ಮೌನವೇ ಬಾರ!

೩

ಸರಿಯಿರುಳ ಸಮಯದೊಳು
ಪೆರೆಯ ಸಿರಿವೆಳಕಿನೊಳು
ಸಿರವೆತ್ತಿ ಸುತ್ತಲೂ ನೋಡಿ,

೪

ಗದ್ದಲದ ಗಡಿಬಿಟ್ಟು,
ನಿದ್ದೆಯಾಚೆಗೆ ಮುಟ್ಟಿ
ಎದ್ದಿರುವ ಮೌನವೇ ಬಾರ!

೫

ಬರುತೆನ್ನನಾವರಿಸಿ
ಧರೆಯ 'ಕಿರಿಕಿರಿ' ಸರಿಸಿ
ಕರುಣೆಯಿಂ ಗುಟ್ಟುಗಳ ತೋರು!

## ಕೋರಿಕೆ

೬

ಕದಲದಿರು! ಕದಲದಿರು!!
ಕದಲಿ ನೀ ಹೋಗದಿರು!
ಕದಲಿದರೆ ಕದಡುವದು ಚಿತ್ತ!

೭

ಕಲಕಾದ ಮಡುವಿನೊಲು
ಕಲಕಾದ ಒಳಬಗೆಗೆ
ಹೊಳೆಯದತಿ ಗೂಢವಿಹ ಗುಟ್ಟು!

೮

ಸಿದ್ಧಾಂತವರಳಿಸುವ
ಶುದ್ಧವಾಗಿಹ ಬೆಳಕೆ,
ಮುದ್ದಾಗಿ ಹೃದಯದೊಳು ಕೂರು!

೯

ಕುಳಿತೆನ್ನಯೊಳಬಗೆಗೆ
ಹೊಳೆಯದಿಹ ಗುಟ್ಟುಗಳ-
ನೊಲುಮೆಯಿಂ ಕೊನೆವರೆಗು ತೋರು!

೧೦

ತೋರಿಸುತ ನೀನಿರಲು,
ಯಾರ ಹಂಗೇತಕ್ಕೆ?
ಧಾರಣೆಯ ಮಾತಿನಿಂದೇನು!

# ಬೆಳ್ದಿಂಗಳಿರುಳು.



೧

ಹಾಲಿನ ಕಡಲಲಿ ಜಳಕವ ಮಾಡಿ
ಈಗಳೆ ಬಂದಿಹಳಿವಳನು ನೋಡಿ!
ನೀಲಿಯ ಮುಗಿಲಿನ ಕುರುಳೋಳಿಯಲಿ
ಜಾರ್ವವು ಚುಕ್ಕಿಯ ಹನಿಗಳು ಕೂಡಿ!

೨

ಹಿಂದಕೆ ಧರಿಸಿದ ರೂಪವ ಬಿಟ್ಟು,
ಬೆಳ್ಪಿನ ಮುಡಿಯನು ಬೆಡಗಿನೊಳುಟ್ಟು,
ಸುತ್ತಣ ಲೋಕಕೆ ಸೊಗಸನು ಕೊಟ್ಟು,
ಬರುತಿಹಳೆಲ್ಲೆಡೆಯೊಳಗಡಿಯಿಟ್ಟು!

೩

ಮಿತ್ರನ ಕಾಂತಿಗೆ ಮೊಗವನು ನೀಡಿ
"ನನ್ನೀ ಚಲ್ವಿಕೆಗೇನದು ಜೋಡಿ?"
ಎನ್ನುತ ಹರುಷದಿ ಕುಣಿಕುಣಿದಾಡಿ
ಬರುವಳು ಬೆಡಗಿನ ಮಾಲೆಯ ಸೂಡಿ!

## ಕೋರಿಕೆ

೩

ಮುಂದಕೆ ಮುಂದಕೆ ಮುಂದಕೆ ಸಾಗಿ
ನಿದ್ದೆಯನೆತ್ತುತ ಕಣ್ಣಲಿ ತೂಗಿ
ಕಬ್ಬಿಗನೊಳು ಕನಸಾಗುತೆ ಬಾಗಿ
ಬರುವಳು ಕೊನೆಯೊಳು ಸವಿ ಹಾಡಾಗಿ!

೪

“ಮೋಹಿನಿಯೋ ನೀ ಚಲುವೆಯು?” ಎಂದು
ನೇಹದಿ ನೋಡುತ್ತಿರೆ ನಾನಂದು,
ಮೋಹವು ತಾನಾವರಿಸಿತು ಬಂದು!
ಬಗೆದೆನು, “ನಿನ್ನನು ನಾ ಬಿಡೆನೆಂದು!”

೫

ಮುದ್ದಿನ ಮೊಗವನು ಹಿಂದಕೆ ತೋರಿ,
ಕಡೆಗಣ್ಣೋಟದಿ ನಗೆಯನು ಬೀರಿ
ಬಗೆಯನು ಸೆಳೆಯುತ ಮುಂದಕೆ ಸಾರಿ,
ಹೋದಳು ಹಾ! ಹಾ! ಯಾರನೊ ಸೇರಿ!

೬

ನಿಡುಸುಯ್ಯುತ ನಾನವಳನು ಬೇಡಿ
ಕರೆದೆನು! ಕರೆದೆನು ಮೊಗದೊಳು ಬಾಡಿ!
ಸೊಬಗದು ಹೋಯಿತು ಅವಳನು ಕೂಡಿ!
ಹಗಲದು ಮರಳಿತು ಮುಂದಕೆ ದೂಡಿ!

---

# ಹೊತ್ತು!



ದೊರೆತಾಗ ದೊರಕಿಸದೆ ಹೋದಾಗ ಹುಡುಕುತ್ತ-
ಲಿರುವೆನಿತು ಜನರಿರುವರೀ ಜಗದೊಳು?

೧

"ಕದವ ತೆರೆಯಿರಿ ನೀವು, ಕದವ ತೆರೆಯಿರಿ" ಎಂದು
ಒದರಿದನು ನಡುಗುತಿಹ ನುಡಿಯೊಳವನು!
"ಮುದುಕ ನಾನಿರುತಿರುವೆ! ಬಳಲಿ ಬೆಂಡಾಗಿರುವೆ!
ಹೆದರುತಿದೆಯುದರೆ ಕಾರಣವದಿಲ್ಲ!"

೨

ಮಲಗಿ ಹಾಸಿಗೆಯಲ್ಲಿ ನಿದ್ದೆಯನು ಮಾಡುತಿಹ
ಲಲಿತೆ ದನಿಯನು ಕೇಳಿ ಕಣ್ದೆರೆಯುತ
ಉಲುಹ ಮಾಡದೆ ತಾನು ಬಾಗಿಲಿಗೆ ನಡೆತಂದು
ನಿಲುತ ಕೇಳಿದಳವನ ಮೆಲುಮಾತನು!

೩

"ತಿರುಗಿದೆನು ತಿರುಗಿದೆನು ಅಡವಿಯೊಳು ಕಂಗೆಟ್ಟು
ಬಿರುಗಾಳಿ ಹೊಡೆತಕ್ಕೆ ಸಿಕ್ಕಿ ಬಿಕ್ಕಿ!

## ಕೋರಿಕೆ

ಕೊರಗುತಿಹೆ ಚಳಿಯಿಂದೆ! ಮರುಗುತಿಹೆ ಹಸಿವಿನಿಂ
ಕರುಣೆದೋರಿರಿ ನೀವು ಪುಣ್ಯಾತ್ಮರೇ!

೨

"ಸೋತು ತತ್ತರಿಸುವವು ಕಾಲುಗಳು ದಣುವಿನಿಂ!
ಮಾತಾಡಲೆನಗೀಗ ಶಕ್ತಿಯಿಲ್ಲ!
ಕಾತರನು ಕಂಗೆಟ್ಟು ಆಸರವ ಕೇಳುತಿಹೆ!
ಪ್ರೀತಿಯಿಂ ಕಾಪಾಡಿರೆನ್ನ ನೀವು!

೩

"ಅಮ್ಮ! ಒಳಗಾರಿಲ್ಲೆ? ಕೇಳಿಸದೆ ಈ ಸೊಲ್ಲು?
ಸುಮ್ಮನೇಯೇಕಿಹುದು ಪೇಳ್ವುದೀಗ!
ಒಮ್ಮೆಯಾದರು ನೀವು ಮೆಚ್ಚಿತ್ತು ತುತ್ತನ್ನ-
ವಂ ಮನವ ತಣಿಸುವದು ಬಳಲಿದವನ"

೪

ದ್ವಾರವನು ನೂಕಿದನು! ಕಸಿಕರದೊಳೊದರಿದನು!
ಚಾರುಗಾತ್ರಿಯು ಕೇಳಿ ಹೆದರಿ ಬೆದರಿ!
ತೋರದಲೆ ಹಂಚಿಕೆಯು ಹಾರಿಬಿದ್ದಳು ನೆಲಕೆ!
"ಯಾರಿಹರೊ ಅಯ್ಯೊ! ನಟ್ಟಿರುಳಿನಲ್ಲಿ!"

೭

ಹಾಳುಗೋಡೆಯು ನೆಳಲಿನೊಳು ನಿಂತು ಭೂತಗಣ-
ವಾಲಿಸುತಲೀ ಸೊಲ್ಲನಣಕಿಸುವದು !
ತೇಲುತಲಿ ಟೇಂವಕ್ಕಿಯೊಂದು ಬಾಂದಳದಲ್ಲಿ
ಜಾಲವನು ಹರಡುವದು ತನ್ನ ದನಿಯು

೮

“ನಿಂತಿಂತು ಬೇಸತ್ತು ಹೋಗಿರುವೆ! ಏ ಅಮ್ಮ,
ಎಂತು ತಾಳಲಿ ಹಸಿವು ನೀರಡಿಕೆಯು !
ಹಿಂದಿರುಗಲೇನಮ್ಮ? ಆಸರವು ಸಿಗದೇನು ? ”
ಇಂತೆಂದು ಸಾಗಿದನು ನಿಡುಸುಯ್ಯುತ !

೯

ಮುಗಿಲೊಳಗೆ ಮಿನುಗುತಿಹ ಉಡುಗಣವು ಮುಡುಕಿದುದು!
ನಗುತಲಿಹ ಚಂದಿರನು ಕಳೆಗುಂದಿದ !
ಸೊಗಸಿನಿಂ ಸುಳಿಯುತಿಹ ಗಾಳಿ ನಿಡುಸುಯ್ಯಾಗಿ
ತಗಬಗೆಯ ಉಸಿರಿನೊಳಗೊಂದಾಯಿತು !

೧೦

ಬೀಳುತಲಿ ಚಣಚಣಕೆ ಕೈಗೋಲ ಸಪ್ಪಳವು
ಕೇಳದಾಯಿತು ಕೊನೆಗೆ ದೂರದಲ್ಲಿ !

## ಕೋರಿಕೆ

ಜೋಲಿ ಹೊಡೆಯುತ ಹೋಹ ಮುದುಕನಾಕಾರವನು
ಲೋಲಾಕ್ಷಿ ಮನದಲ್ಲಿ ತಾ ಕಟ್ಟುತ!

೧೧

" ಬಲು ಪಾಪಿಣಿಯು! ಪುಕ್ಕಿ! ಬೆದರಿದೆನು ಮುದುಕನಿಗೆ
ತಿಳಿಯಲಾರದೆ ಹೋದೆನವನ ಸೊಲ್ಲ!
ಖಳರು ಮೋಸವ ಮಾಳ್ಪರೆಂದು ನಾ ಬಗೆಯುತಲಿ
ಕಳಕೊಂಡೆ ಮುತ್ತಿನಂತಹ ಹೊತ್ತನು!

೧೨

" ದೊರೆತಾಗ ದೊರಕಿಸದೆ ಹೋದಾಗ ಹುಡುಕುತ್ತ-
ಲಿರುವೆನಿತು ಜನರಿರುವರೀ ಜಗದೊಳು?
ಮರುಗುತಲಿ ಕುಳಿತರೂ ತೆರಳಿರುವ ಮುದುಕನವ
ತಿರುಗಿ ಬೇಡಲು ಬರುವನೇನು ಇನ್ನು?"

---

# ಭಕ್ತಿ.



೧

"ಹೇ ವ್ಯಕ್ತಿಯೇ, ಸುರಿವವಶ್ರುಗಳದೇಕೆ?"
"ಅವ್ಯಕ್ತನನು ಕಾಣಲೆಂದು ಹಂಬಲಿಕೆ!"

೨

"ಹಂಬಲದ ಬೆಂಬಲವೆ ಮುಂದರಿವ ದಾರಿ"
"ಮುಂಬಂದರಿನಿಸಾನು ಕಾಣ ಬಳಿಸಾರಿ!"

೩

"ಕಾಣನೇ? ಕಾಣೆಯಾ ಕಂಬನಿಗಳನ್ನು?"
"ಜಾಣನೇ ಪೇಳಿದರ ಗೂಢಾರ್ಥವನ್ನು"

೪

"ತುಂಬಿರುವ ಕೊಳದೊಳಗೆ ಹಾರಲೇನೊದಗುವದು"
"ಅಂಬುವನಿಗಳು ತುಳುಕಿ ಪೋಲ್ಬರುವವವು ಸಿಡಿದು"

೫

"ಎದೆದುಂಬಿ ಕೊರಲ ಸೆರೆಯುಬ್ಬಿರುವದಲ್ತೇ?"
"ಅದ ನಿನ್ನ ಬಗೆದಿಟ್ಟಿಗಳು ಪೇಳ್ವವಲ್ತೇ?"

೬

"ಇಂತಿರಲು ಚಿಂತೆಯೇ? ಲಭಿಸುವದು ಬಗೆವಯಕೆ!"
"ಅಂತಾದೊಡೆಲ್ಲಿಹುದು ದುಗುಡವದು ಮನ್ಮನಕೆ?"

೭

"ನಂಬುಗೆಯು ತನಿರಸದಿ ತುಂಬಿರಲು ನಿನ್ನೆದೆಯು"
"ಕಂಬನಿಗಳೊಸರುವವೆಯದರೊಳಗೆ ಪರನಿಳಿಯೆ?"

೮

"ದಿಟದಿಟವು! ದಿಟದಿಟವು!! ನೀನೆನ್ನುವದು ದಿಟವು!!!"
"ಅಟಮಟದ ಮಾತಲ್ಲೆ? ನಂಬಲೇನೀ ವಚನ?"

೯

"ನಿನ್ನೊಳಗೆ ನೀ ನೋಡು, ಕಾಣ್ಬುದಾ ಪರವಸ್ತು!"
"ಮನ್ನಿಸುವೆನೀ ನುಡಿಯ! ನಿನಗೆ ಮಂಗಳಮಸ್ತು!"

೧೦

ಕೇಳ್ವ ದನಿಯೇ ಕೊನೆಗೆ ಹೊಳೆವ ಬೆಳಕಾಯ್ತು!
ಹೇಳ್ವ ದನಿಯದರೊಳಗೆ ಬೆರೆದು ಬಯಲಾಯ್ತು!

---

# ರನ್ನವಕ್ಕಿ.



ತುಂಬಿದೇಕಾಂತದಲಿ
ರೆಂಬೆ ಮರೆಯಲಿ ಕುಳಿತು
ಗಾಂಭೀರ್ಯವುಲಿಯುತಿಹುದೇನದಲ್ಲಿ ?

ಸೃಷ್ಟಿಸೌಂದರ್ಯದಲಿ
ತುಷ್ಟಿವಡೆದಿಹ ಕವಿಯ
ಹೃಷ್ಟಚಿತ್ತವೆ ರನ್ನವಕ್ಕಿಯಲ್ಲಿ

ಉಬ್ಬುಗೊರಲಲಿ ಕೂಗಿ
ಹಬ್ಬಿರುವ ಮೌನವನು
ತಬ್ಬುತಚ್ಚರಿಗೊಳಿಸುತಿರ್ಪುದೇನು ?

ಧಾರಿಣಿಯ ಕ್ರೂರತೆಗೆ
ಮೋರೆದೋರದೆ ನೊಂದು
ಯಾರಿರದ ಬನದಿ ಪಕ್ಷಿಯ ವೇಷದಿ

ಹಾರುತೋರ್ವನು ಯತಿಯು
ಕೋರಿ ಶಾಂತಿಯ, ಸತತ
ಸಾರುತಿಹ ಓಂಕಾರ ದೀರ್ಘಸ್ವರವೋ ?

ಎಂಬ ನಿನ್ನಾಧ್ವನಿಯು
ಬಿಂಬಿಸುತ ಬನದೊಳಗೆ
ಚುಂಬಿಸಲು ನನ್ನಯೀ ಹೃದಯವನ್ನು

ಮೇಲುನಡೆಯೊಳಾವುಲಿಯು
ಸುಳಿವಿಡಿದು ಬಂದು ನಾ
ನಿಲುತ ಗಿಡದೊಳು ನಿನ್ನ ನೋಡುತಿರುವೆ!

ಮುದ್ದಿನಾ ಮುದ್ದೆಯನು
ತಿದ್ದಿ ನುಣುಪಿನ ಪಕ್ಕ
ಹೊದ್ದಿಸುತ ಬಿದಿ ಜಗದಿ ಹಾರಿಸಿದನೇ?

ಬಿಸಿಲ ಮೊಗ ನೋಡದಿಹ
ಎಸೆವ ಕೋಮಲ ಕುಸುಮ-
ವಿಸರವೇ ಹಕ್ಕಿಯೋಲರಳಿರುವದೇ?

ಮುಗಿಲ ಪೆಂಪಿನ ಕೆಂಪು
ಜಗದ ನೆಳಲಲಿ ಬೆರೆತು
ಹೊಗರ ಸೂಸುತ ಪಕ್ಕವಣ್ಣವಾಯ್ತೋ?

ಹಕ್ಕಿ ನಿನ್ನಯ ಮೈಗೆ
ತಕ್ಕವಾರ್ದವವದಕೆ
ತಕ್ಕ ಪಕ್ಕಗಳವಕೆ ತಕ್ಕ ಬಣ್ಣ!

# ಕೊಕ್ಕರೆ

ಕೊಕ್ಕುಕಣ್ಣುಗಳು ಮೊಗಕೆ
ತಕ್ಕವಾಗಿರೆ ಕಾಲ್ಗೆ
ತಕ್ಕ ನಡೆ 'ತಕ್ಕುದೇ' ಹಕ್ಕಿಯಾಯ್ತೇ?

ಮೆರೆವ ಪ್ರಕೃತಿಯ ನಡುವೆ
ಮಿರುಗುವಾತ್ಮದೊಲಿರುವ
ಸರಸ ಪಕ್ಷಿಯೆ ನೋಡದೆನಿತು ನಿನ್ನ

ಹೊರಗನೇ ಬಣ್ಣಿಸುತ
ಹೊರಗನೇ ಹಣ್ಣಿಸುತ
ಮರೆಯಾದರಲ್ಲ! ಪೂರ್ವದ ಕವಿಗಳು!

ಹಿಂಗರಿಯು ಮೇಲ್ನಿಮಿರೆ
ಅಂಗಸೌಷ್ಟವಕೆನಿತು
ಭಂಗಬರದೊಲು ಕಾಣ್ಬ ಬೆಡಗದೆನಿತೋ!

ನುಣ್ಗೊರಲ ಕೊಂಕಿಸುತ
ಬಿಣ್ಗೊಕ್ಕಚಾಚಿ ತನಿ-
ವಣ್ಗಡಿವ ನೋಟ ಕಣ್ಗೆನಿತಂದವೋ?

ಗರಿಗಳನು ಚುಂಚುವಿಂ
ಸರಿಪಡಿಸಿಕೊಳುಕೊಳುತೆ
ನಿರುಗಸುವ ಬಗೆಯು ಹಾ! ಸೊಗಸದೆನಿತೋ!

## ಕೋಗಿಲೆ

ಹೆಜ್ಜೆ-ಹೆಜ್ಜೆಗೆ ಭಾವ
ಗೆಜ್ಜೆಗಳು ಘಲಿರೆನಲು
ಪಜ್ಜಳಿಪ ರೂಪವೇಂ ಕುಣಿಯುತಿಹುದೋ!

ಅತ್ತೊಮ್ಮೆ ಇತ್ತೊಮ್ಮೆ
ಕತ್ತ ನೊಲಿದಾಡಿಸುತ
ಚಿತ್ತರದಿ ನಡೆಯುತಿಹ ಸೊಬಗದೆನಿತೋ!

ನಿನ್ನನ್ನು ಬಣ್ಣಿಪುದು
ನನ್ನಳವೆ? ಹಕ್ಕಿಗಳ
ರನ್ನವೇ, ದಿಟದಿ ನೀ ರನ್ನನಕ್ಕಿ!

ತಂಪಿಂಪು ಸೊಂಪುಗಳು
ಗುಂಪಾಗಿ ಮೂಡುತಿವೆ
ಪೆಂಪಿನಲಿ ನಿನ್ನಡಿಯು ಸೋಂಕಿದೆಡೆಯೊಳ್!

ಯುಗದಾದಿಯಲಿ ನಿನ್ನ
ಮೊಗದ ದರುಶನಕಾಗಿ
ಜಗವೆಳಸಿ ಸುತ್ತಲೂ ಅರಸುತಿಹುದು!

ನಿನ್ನ ಕಂಡೊಡನೆ ಮಿ-
ಷ್ಟಾನ್ನ ಫಲವೆಂದೆನುತ
ಪುಣ್ಯ ಮೂರ್ತಿಯೆ, ನಿನ್ನ ನುತಿಪುದಿಳೆಯು!

ಎಂಬ ಬಗೆರೆಂಬೆಯುಲಿ
ಇಂಬುಗೊಳೆ ಬಗೆವಕ್ಕಿ,
ರೆಂಬೆಯಿಂ ಗೋಣ್ನೀಡಿ ರನ್ನವಕ್ಕಿ

ಹಾರಿತದೊ ಪವ್ವನೇ !
ಹಾರಿ ಕಣ್ಮರೆಯಾಯ್ತು !
ಹಾರಿತದರೊಡನೆನ್ನ ಬಗೆವಕ್ಕಿಯು!

ನಿಂತಲ್ಲಿ ನಿಂತಿದ್ದೆ,
ಭ್ರಾಂತಿ ವಡೆದವನಂತೆ!
ಹಿಂದಿರುಗಿ ತಳಲುಕ್ಕೆ, ಬಗೆವಕ್ಕಿಯು!

ದೂರದಿಂದೇಳ್ವ ಗಂ-
ಭೀರ ನಾದವದೊಂದು
ಸಾರುತಿಹುದೀಗಳುಂ ಬಗೆಗಿವಿಯೊಳು!

ಆ ನಾದ ಝರಿಯೊಳಗೆ
ರನ್ನವಕ್ಕಿಯ ರೂಪು
ಕಾಣುತಿದೆ. ಒಳಗಣ್ಗೆ ತೇಲಿ ತೇಲಿ !!

# ಕಣ್ಣು



೧

ಪಿಂಡಾಂಡದಾಗಸವೆ.
ಬ್ರಹ್ಮಾಂಡದಾಗಸವು
ತೋರ್ಪುದನ್ನೆ
ನೀನು ತೋರ್ಪೆ ಕಣ್ಣೆ!

೨

ಬಗೆಯ ಪಡಿಮೂಡಿಸುವ
ತಿಳಿಯಾದ ಮುಕುರವೇ,
ನಿರುತ ಸೊಗದಿ
ಮಿರುಗುತಿರುವೆ ಮೊಗದೀ

೩

ನುಡಿಗೆ ತಪ್ಪುಗಳುಂಟು
ನಿನ್ನ ನುಡಿಗೆಲ್ಲುಂಟು
ಆ ತಪ್ಪುಗಳ್
ಎಲ್ಲವು ಒಪ್ಪುಗಳ್

**ಕೋರಿಕೆ**

೪

ಕಿರಿಯಿಂದೆ ಹಿರಿಯೆಡೆಗೆ
ಬಿಡಿಯಿಂದೆ ಇಡಿಯೆಡೆಗೆ
ಒಗೆಯನೊಯ್ವೆ!
ಶಂಕೆಗಳನು ಕೊಯ್ವೆ!

೫

ಇರುವೆ ನೀ ತನುವಿನೊಳು!
ನೀನು ತನು ವಿಶ್ವದೊಳು!
ಈಸು ತಳದಿ
ವಿಶ್ವದಗಲನಳೆದೆ!

೬

ನಿನ್ನ ನಿರ್ಮಿಸಿ ಮೆರೆವ
ಗನ್ನನವನೆಂತಿರುವ —
ನೆಂದು ನಿಂತೆ।
ಅಶ್ರುಬಿಂದುವಾಂತೆ!

---

# ಸಾವು



೧

ಮುಚ್ಚಿದಚ್ಚಿಗಳನ್ನು ಬಿಚ್ಚಿ ನಾ ನಿರುಕಿಸುವೆ
ನಿಚ್ಚವೂ ದುಡಿದುಡಿದು ದಣಿದು ಸೋತಿಹ ಜಗವು
ಇಚ್ಚೆಯೊಲು ಮೆಚ್ಚುವಡೆದೊರಗಿರಲು ತಣಿವಿನೊಳು
ಒಚ್ಚನೆಯುದರ ಮೇಲೆ ಪಡಿನೆಳಲ ಕೆಡಹುತಲಿ
ಮೀಂಟುತಲಿ ಬಳಲಿಕೆಯ
ನಂಬಿಸುತ ದಿಕ್ತಟವ
ಗಂಟುಗೆಂಟುಗಳನ್ನು
ಈಂಟೆ ಬಿಡುಗಣ್ಗಳಲಿ
ಮುಗಿಲೊಳಗೆ ನೋಡುತಲಿ, ಜಗದೊಳಗೆ ನಡೆಯುತಲಿ
ಬಗೆ ಬಗೆಯ ಬಗೆಗಳಲಿ ಬರುವೆ ಜೀವಿಗಳ ಬಳಿ!

೨

ನಟ್ಟಿರುಳಿನೊಳು ಸಾವೆ ನಿನ್ನ ರೂಪವ ಕಂಡೆ!
ನಿಟ್ಟಿಸುತು ಸುತ್ತಲೂ ನಿನ್ನ ಸವಿಯನು ಉಂಡೆ।
ಹುಟ್ಟಿನೊಳಗಿನ ಹುಟ್ಟು, ನಿನ್ನಿಂದೆ ಹುಟ್ಟಿನೆಡೆ
ಮುಟ್ಟಿಸುವ ಬಟ್ಟೆಯನು ಮರೆಮಾಡಿರುವ ಗುಟ್ಟು

## ಕೋರಿಕೆ

"ಕಟ್ಟು ಕಟ್ಟಳೆಗಳನು
ಮೆಟ್ಟುತೀ ಬದುಗೆಯು
ಕೆಟ್ಟ ಚಲುವೆಲ್ಲವನು
ಒಟ್ಟುತಲಿ ಸಮತೆಯಲಿ
ಕುಟ್ಟುವದು ನಿರ್ದಯದೊಳೆ" ನುತ ಜನ ಜಂಕಿಪುದು
ತಟ್ಟೆ ಕರುಳನು ಸಾವೆ ಕಂಬನಿಯು ಪುಟ್ಟಿಪುದು

೩

ನಿಶೆಯು ತನ್ನೊಳು ಹಗಲ, ದಣಿವು ತನ್ನೊಳು ಸೊಗವ,
ಬೆಸನ ತನ್ನೊಳು ಸೊಗಸನಿರಿಸಿಕೊಂಡುದಯಿಪೊಲು
ಹೊಸ ಹುಟ್ಟೆ ಹೊಸ ಬೆಳೆಯ ಹೊಸ ಕಳೆಯ ಹೊಸ ಮುದವ
ಹೊಸ ಹೊಸದನೆಲ್ಲವನು ಹುದುಗಿಸುತೆ ನಿನ್ನೊಳಗೆ
ಹಣೆಯ ಹೊತ್ತಿಗೆಯನ್ನು
ಕೊನೆವರೆಗು ಪಠಿಪಠಿಸಿ
ದಣಿದ ಬಾಳನು ನೀನು
ಗುಣವಡಿಸಲಾಗದಿುಸೆ
ಆವ ಹೊತ್ತಿರಲೇನು? ಆವ ಗೊತ್ತಿರಲೇನು?
ಆವ ಹಾಡಿರಲೇನು? ಆವ ಗುರಿಯಿರಲೇನು?

---

## ಏನು ಮಾಡಲಿ?

[ಅಂದು ನಿರಶನ! ನಿಸ್ಸಹಾಯ! ನಿಧನದೆಡೆಗೆಯೋಡುವ ಬಗೆಯು ನಿರಾಶೆಯಿಂದ ಈ ಬಗೆಯಾಗಿ ಅಳುವದು ಅಚ್ಚರಿಯೇ?]

ಏನು ಮಾಡಲೋ?
ಅಣ್ಣಾ,
ಏನು ಮಾಡಲೋ? ॥ಪಲ್ಲ॥

೧

ಉಟ್ಟುಕೊಳ್ಳೆ ಧೋತ್ರವಿಲ್ಲ!
ತೊಟ್ಟುಕೊಳ್ಳಲಂಗಿಯಿಲ್ಲ!
ಹೊಟ್ಟೆಗಕಟ! ಕೂಳದಿಲ್ಲ!
ಏನು ಮಾಡಲೋ?
ಅಣ್ಣಾ,
ಏನು ಮಾಡಲೋ?

೨

ಸಾಯಲಾನು ಸಿದ್ಧನಿಹೆನು!
ಆಯಸದಲಿ ತಮ್ಮನಿಹನು!

## ಕೋರಿಕೆ.

ತಾಯಿ ನೋವ ನೋಡದಿಹೆನು !
ಏನು ಮಾಡಲೋ ?
ಅಣ್ಣ
ಏನು ಮಾಡಲೋ ?

೨

ಸಾಲವೆನಗೆ ಶೂಲವಾಯ್ತು !
ಬಾಳು ಎನಗೆ ಗೋಳದಾಯ್ತು !
ತಾಳದಪ್ಪಿ ಬೀಳ್ವುದಾಯ್ತು !
ಏನು ಮಾಡಲೋ ?
ಅಣ್ಣ
ಏನು ಮಾಡಲೋ ?

೩

ಕೇಳಲೆಂತು ಗೆಳೆಯರನ್ನು
"ಬೀಳುತಿರುವ ಬಡವನನ್ನು
ಏಳಿಸೆಂ" ದು ಮರಳಿ ಇನ್ನು ?
ಏನು ಮಾಡಲೊ ?
ಅಣ್ಣ
ಏನು ಮಾಡಲೋ ?

## ಕೋರಿಕೆ

೫

ನಲುಮೆ ನೆರವ ಸಲಿಸುತೆನ್ನ
ನೊಲುಮೆಯಿಂದಲಿಲ್ಲಿವರೆಗು
ಸಲಹಿದವರಿಗೇನು ಕೊಡಲಿ?
ಏನು ಮಾಡಲೋ?
ಅಣ್ಣ,
ಏನು ಮಾಡಲೋ?

೬

ಅಂಥ ಗೆಳೆಯರಂಥ ಜನರ
ಶಾಂತವೃತ್ತಿಗಿಂದು ನಾನು
ಎಂತು ಪಡೆದು ಸಂತವಿಡಲಿ?
ಏನು ಮಾಡಲೋ?
ಅಣ್ಣ,
ಏನು ಮಾಡಲೋ?

೭

ಮೆಯ್ಗೆ ಸೊರಗು ಸುತ್ತಿತಕಟ!
ಬಾಯ್ಗೆ ಕೊರಗು ಮುತ್ತಿತಕಟ!
ಕೆಯ್ಗೆ ಗುರಿಯು ನಿಲುಕದಾಯ್ತು!
ಏನು ಮಾಡಲೋ?
ಅಣ್ಣ,
ಏನು ಮಾಡಲೋ?

೮

ಬಂದು ಮಿತ್ರರಂತೆ ಕೆಲರು
ಸಂದ ಗುರಿಯು ಹರಿದು ತಿಂದು
ಹಿಂದಕ್ಕಟ್ಟಿ ಬಿಟ್ಟರಕಟ!
ಏನು ಮಾಡಲೋ?
ಅಣ್ಣ,
ಏನು ಮಾಡಲೋ?

೯

ಅಸೆನುಡಿಯ ನುಡಿಯುತೆನ್ನ
ಘಾಸಿಗೊಳಿಸಿ ಸ್ವಾರ್ಥವನ್ನೆ
ಹಾಸಿಬಿಟ್ಟರೆನ್ನ ಪಥದಿ!
ಏನು ಮಾಡಲೋ?
ಅಣ್ಣ,
ಏನು ಮಾಡಲೋ?

೧೦

ಜಗವಿದಯ್ಯೊ! ಸ್ವಾರ್ಥವಿಹುದೇ?
ನಗುತ ನಗುತ ವಂಚಿಸುವದೆ?
ಬಗೆಯನಗಿದು ಹುಗಿಯುತಿಹುದೇ?
ಏನು ಮಾಡಲೋ?
ಅಣ್ಣ,
ಏನು ಮಾಡಲೋ?

೧೧

ಕಾಯ್ವ ದೇವ ಕಣ್ಣ ಮುಚ್ಚೆ,
ಮಾಯವಾಗೆ ಮನದ ಇಚ್ಛೆ,
ಸಾಯ್ವುದೇನು ಜಗದಿ ಹೆಚ್ಚೆ,
ಏನು ಮಾಡಲೋ ?
ಅಣ್ಣಾ,
ಏನು ಮಾಡಲೋ ?

---

# ಸ್ವಾತಂತ್ರ್ಯವೇ ಬೇಕು.

ಸ್ವಾತಂತ್ರ್ಯವೆ ಬೇಕು।
ಎಳ್ಳಿಗೆ
ಸ್ವಾತಂತ್ರ್ಯವೆ ಬೇಕು ॥ಪಲ್ಲ॥

೧

ಹರಿಯುವ ಹಳ್ಳಕೆ ಹಾಕಲು ತಡೆಯನ್ನು,
ಮೊರೆಯುತ ಮುಂದಕೆ ಸಾಗುವದೇ ?
ಸ್ವಾತಂತ್ರ್ಯವೆ ಬೇಕು
ಪ್ರಗತಿಗೆ
ಸ್ವಾತಂತ್ರ್ಯವೆ ಬೇಕು !

೨

ಹಕ್ಕಿಯು ಪಂಜರದೊಳಗಿಕ್ಕಲು ತಾ-
ನಕ್ಕರೆಯಿಂದಲಿ ಹಾಡುವದೇ ?
ಸ್ವಾತಂತ್ರ್ಯವೆ ಬೇಕು !
ಹಾಡಿಗೆ
ಸ್ವಾತಂತ್ರ್ಯವೆ ಬೇಕು !

೩

ನೇಸರ ಮುಗಿಲೋಳಿಯು ಸಲೆ ಮುತ್ತಲು
ಭಾಸಿಪ ಬೆಳಕನು ಕೊಡುತಿಹನೇ ?

## ಕೋರಿಕೆ.

ಸ್ವಾತಂತ್ರ್ಯವೆ ಬೇಕು
ಬೆಳಕಿಗೆ
ಸ್ವಾತಂತ್ರ್ಯವೆ ಬೇಕು !

೪

ಅರೆಯರಳಿದ ಬಿರಿಮುಗುಳನು ಹರಿಯಲು,
ಸುರುಚಿರ ಪರಿಮಳವೀಯುವದೇ ?
ಸ್ವಾತಂತ್ರ್ಯವೆ ಬೇಕು
ಹೂವಿಗೆ
ಸ್ವಾತಂತ್ರ್ಯವೆ ಬೇಕು !

೫

ತಿರುಗುವ ಸಿಂಗನ ಸೆರೆಮನೆಯೊಳಗಿಡೆ
ಕೆರಳದೆ ಶಾಂತಿಯೊಳಿರಬಹುದೇ ?
ಸ್ವಾತಂತ್ರ್ಯವೆ ಬೇಕು
ಶಾಂತಿಗೆ
ಸ್ವಾತಂತ್ರ್ಯವೆ ಬೇಕು !

೬

'ನಿಗಿನಿಗಿ'ಯುಗಿನಿಯ ಹುಗಿಯಲು ಮಣ್ಣೊಳು,
ಝಗಿಝಗಿಸುವದೇ ಮುನ್ನಿನೊಲು ?
ಸ್ವಾತಂತ್ರ್ಯವೆ ಬೇಕು!
ತೇಜಕೆ
ಸ್ವಾತಂತ್ರ್ಯವೆ ಬೇಕು !

೭

ಪಾತಾಳವ ಭೇದಿಪ ಜಲಪಾತಕೆ
ಸ್ವಾತಂತ್ರ್ಯವ ಕೊಡದಿರಲೇನು ?
ಸ್ವಾತಂತ್ರ್ಯವೆ ಬೇಕು!
ಶಕ್ತಿಗೆ
ಸ್ವಾತಂತ್ರ್ಯವೆ ಬೇಕು!

೮

ಇರೆ ಸ್ವಾತಂತ್ರ್ಯದೊಳಿಲ್ಲವು, ದೇವಾ,
ಕರುಣಿಸುತದನೇ, ಪೊರೆಯುವದು !
ಸ್ವಾತಂತ್ರ್ಯವೆ ಬೇಕು!
ದೇಶಕೆ
ಸ್ವಾತಂತ್ರ್ಯವೆ ಬೇಕು!



## ಇನ್ನೆಂತು ?



೧

ನಾ ಬಿಡುವ ನಿಟ್ಟುಸಿರು
ಸುಡುತಲಾಸೆಯ ಬಸಿರ,
ಮುಗಿಲ ಕಮರಿಸುತಿಹುದು
ನೋಡು ದೇವಾ !

ನಾ ಸುರಿಪ ಕಣ್ಣ ಪನಿ
ಕರಗಿಸುತ ಗುರಿಯ ಮಣಿ
ಯನು, ಜಗವ ಮುಳುಗಿಪುದು
ವಿಶ್ವಜೀವಾ !

೨

ನನ್ನ ಈ ರೋದನವು
ಬೆದರಿಸುತ ಸಾಧನವ,
ದೆಸೆಗಳನು ಮುಸುಗುವದ
ಕೇಳಲೆಂತು ?

ನನ್ನ ಈ ಎದೆಯ ಧಗೆ
ಚುಯ್ಯೆನಿಸಿ ಶಾಂತಿ ಬಗೆ
ಯನು, ಕಡಲ ಕುಡಿಯುತಿರೆ,
ತಾಳಲೆಂತು ?

ಕೋರಿಕೆ.

೩

ನನ್ನ ಈ ಹೊರಳಾಟ
ಬೀರಿ ಸುತ್ತಲು ಕಾಟ
ವದರಿಸಲು ಪಾತಾಳ
ವಳಕುತಿರುವೆ !

ನನ್ನ ಈಯಾಕಾರ
ವೊದಗಿಸುತೆ ಚೀತ್ಕಾರ
ವನು, ಹೆದರಿಸಲು ಸಾವ
ನಳಲುತಿರುವೆ !

೪

ಒಳಗು ಹೊರಗೂ ಗೋಳು !
ಮೇಲೆ ಕೆಳಗೂ ಗೋಳು !
ಸುತ್ತುಮುತ್ತೆಲ್ಲೆಲ್ಲು
ಗೋಳೆ ಗೋಳು !

ನನ್ನ ಹೆಜ್ಜೆಯ ಸೊಪ್ಪು
ಳಿಗೆ ಪಲ್ಲಟವು ಬೆಪ್ಪು
ವಡೆದು ಮರೆದಿಹುದೇನೊ
ಎನ್ನ ಬಾಳ !

೫

ನಾ ಬಯಸಲೆನ್ನೆಂತ
ಕೆನ್ನಿಂದ ಜಗವಿಂತು

## ಕೋರಿಕೆ

ಬೇಸರಲು, ನೋಡಿ ನಾ
ಸಹಿಸಲೆಂತು ?

ಇನ್ನೆಂತು ? ಇನ್ನೆಂತು ?
ಇನ್ನು ಬಾಳುವದೆಂತು ?
ಇನ್ನು ಬೀಳುವದೆಂತು ?
ಹೊಳೆಯುದಂತು !



# ಕನಸೋ? ನನಸೋ?



ಕೂಸು ಮಲಗಿರುತಿಹುದು! ಕತ್ತಲೆಯ ಗಂಭೀರ
ವಾಸದಲಿ ನೆಲಸಿಹುದು ಆಳವಾಗಿಹ ಶಾಂತಿ!
ನೋಡಿದೆನು! ನೋಡಿದೆನು! ರೋಮರೋಮದಿ ಕಣ್ಣು
ಮೂಡಿರಲು ತಿಳಿಬಗೆಯ ಎಳೆಗೂಸನಾ ಚಣದಿ!
ನಗುನಗುತ ಮಲಗಿಹುದೊ ಅತ್ತತ್ತು ಮಲಗಿಹುದೊ
ಬಗೆಗಾಗ ಹೊಳೆಯದಲೆ ಹಾಗೆಯೇ ನೋಡಿದೆನು!
ಕರುಳು ಕರಕರಗಿ ಕಂಬನಿಯಾಯ್ತು! ಅಗಲಿಕೆಯು
ಹೊರಬೀಳ್ವ ನಿಟ್ಟುಸಿರದಾಯ್ತು! ನಾ ಮನವಿರದೆ
ಮನೆಯೆಡೆಗೆ ಯಂತ್ರದೊಲು ಸಾಗಿದೆನು!

ಹಾಸಿಗೆಯೊಳೊರಗಿದೆನು! ಕತ್ತಲೆಯ ಶೂನ್ಯತೆಯು
ಕೂಸಿಂದೆ ತುಂಬಿಹುದು! ಕಣ್ಗಳನು ಮುಚ್ಚಿದೆನು!
ಬಗೆಗಣ್ಣು ನಿಶ್ಯಬ್ದತೆಯಲರಳಿ ನಿಂತಿಹುದು!
ಮುಗಿಲಗಲ ಬೆಳೆದಿರುವ ನಗೆಮೊಗದ ಹಸುಗೂಸ-
ನೆಡೆವಿಡದೆ ನಿರುಕಿಸಲು ಕನಸಿನೊಳು ಧ್ರುವಧ್ರುವದಿ
ಅಡಿಯಿಟ್ಟು ಬೆಳೆದಿರುವ ಗಾಢಾಂಧಕಾರದಲಿ
ಥಳಥಳಿಪ ಬೆಳಕಂತೆ ಹೊಳೆಯುತಿಹ-ಕನಸಿನೊಳು
ಹಳಚದೆವೆಯನು ತಾನು ಮೇಲಕ್ಕೆ ನಿಟ್ಟಿಪುದು!

ಆಹ! ಪರಮಾತ್ಮನಿಂತಿಹನು!
ಪೂಜೆಯಾಸನದೊಳಗೊ ಪಾದಂಗಳೆಸೆಯುತಿವೆ!

## ಕೋರಿಕೆ

ಸೋಜಿಗವು! ಸೋಜಿಗವು!! ಗಣನೆಯನು ನೆರೆ ಮೀರಿ
ರಾಶಿರಾಶಿಗಳಾಗಿ ಬಗೆಬಗೆಯ ಮಲರುಗಳು
ಈಶನಡಿಗಳಲಿಹವು! ನರುಗಂಪ ಸೂಸುವವು!
ಬೆಕ್ಕಾಗಿ ನಾ ನಿಂತೆ ಕೆಲಹೊತ್ತು! ಕೊನೆಗೊಮ್ಮೆ
ಅಪ್ಪ, ಇನಿತೆಲ್ಲ ಕಮ್ಮಲರುಗಳು ಎಲ್ಲಿಯವು?
ಎಂದೆಂದೆ! ನನ್ನ ನುಡಿಯನು ಕೇಳಿ ಪರಶಿವನು
ಮಂದಹಾಸದಿ ನುಡಿದ "ಬಿನ್ನಹಗಳಿವು ಜಗದ
ಜೀವಿಗಳ" ತಲೆ ಕೊಡಹಿದೆನು ನಾನು! ದಿಟ್ಟಿಸಿದೆ
ಹೂವಿನಾ ರಾಶಿಯನು ಬುಡದಿಂದೆ ತುದಿವರೆಗೆ!
ಅಲ್ಲಿ ತುದಿಯಲಿ ಕಂಡೆ ಮಲ್ಲಿಗೆಯ ಮಲರೊಂದ!
ಬೆಳ್ಳಗೇ ಬೆಳಗುತಿದೆ! ಸಿರುತವೂ ಅರಳಿಯಿದೆ!
ನರುಗಂಪ ಸೂಸುತಿದೆ! ವಿಶ್ವವನೆ ಸೆಳೆಯುತಿದೆ!
ನಿರುಕಿಸಿದೆ! ನವಿರೇರಿ ನುಡಿದೆನಾ ದೇವನಲಿ,
"ಈ ಕುಸುಮವಿಂತೇಕೆ?" ಆ ದೇವನಾಡಿದನು,
"ಈ ಕುಸುಮವಾ ಕೂಸಿನೆದೆಯ ಬಿನ್ನಹವು ತಿಳಿ"
ಎನುತೆನುತ ಬಯಲಾದ!
ಕನಸಿನಿಂದೆಚ್ಚತ್ತು ಹೊರಬಿದ್ದು ನೋಡಿದೆನು
ಕೊನೆಮೊದಲು ಇಲ್ಲದಲೆ ಹಬ್ಬಿರುವ ಗಗನದಲಿ
ರಾಶಿರಾಶಿಗಳಾಗಿ ತಾರೆಗಳು ಮಿನುಗುತಿವೆ!
ಭಾಸಿಸುವ ಧ್ರುವತಾರೆಯವುಗಳಲಿ ತಿಳಿಬಗೆಯ
ಬಾಲಕನ ಬಿನ್ನಹದ ಹೂವಿನೊಲು ಬಗೆಗಾಗ
ಲೀಲೆಯಿಂ ಬಲು ಎದ್ದು ಕಾಣಿಸಿತು!
ನೋಡಿಯೇ ನೋಡಿದೆನು! ಅದನೊಂದೆ ದಿಟ್ಟಿಯಿಂ
ನೋಡಿಯೇ ನೋಡಿದೆನು ಕನಸು ನನಸಾಗುವೊಲು!

---

# ಕರ್ಮವೇ!



ಕಟ್ಟಡವಿ! ನಟ್ಟಿರುಳು! ನಿಟ್ಟುಸಿರ ದಾರಿಯಲಿ
ಸುಟ್ಟಾಸೆಯಲೆಯುತಿರಲೋರ್ವ ನೈದೋರಿದನು!
"ನೀನಾವನುಸಿರೆಂ" ದೆ! ಮೌನವೇಯುತ್ತರವು!
"ಏನು, ಬಾಯ್ನಿನಗಿಲ್ಲೆ?" ಮತ್ತೊಮ್ಮೆ ಕೇಳಿದೆನು!
ಗೆಯ್ಮೆಯೋ ಬಾಯ್ದೆರೆಯುವೋಲವನು ಬಾಯ್ದೆರೆದ!
ಮೆಯ್ಮರೆತು ಬೆರಗಿನೊಳು ಕಣ್ಬಿಟ್ಟು ನೋಡಿದೆನ-!
ಪರಿಚಯದ ಅರೆಮರೆಯು ಹತ್ತಿದಂತಾಯ್ತೆನಗೆ!
ನಿರುಕಿಸಿದೆನವನ ಕಗ್ಗತ್ತಲೊಳು ಕಣ್ಣೊರಸಿ!
ಒರ್ಮೆ ತಾ ದೇವನೊಲು ಮೇಣೊರ್ಮೆ ಕರ್ಮನೊಲು
ಪೇರ್ಮೆಯಲಿ ಕೂರ್ಮೆಯಲಿ ಹೊಳೆಯುತಲಿ ಕಾಣಿಸಿದ!
ಹೊಯ್ದಾಡದಿಹ ದಿಟ್ಟ ನೆಲದಗಲ ಮುಗಿಲುದ್ದ
ಬಾಯ್ದೆರೆದು ನಿಂತರೂ ಪೂರ್ಣ ಗುರುತದು ಸಿಗದು!
ಎಂದೆಂದೆ ಮತ್ತೊಮ್ಮೆ "ನೀನಾವನುಸಿರು ಗಡ!"
ಬಂದವನು ನುಡಿಯದಲೆ ಬಿಕ್ಕೆಗೋಸುಗ ಕೈಯ
ಚಾಚಿದನು! "ನಿನಗೀಯಲೆನ್ನ ಬಳಿಯೇನಿಹುದು?"
ನಾಚದಲೆ ನಾ ನುಡಿದೆ! "ಇದ್ದುದನೆ ಕೊಡು" ಎಂದ!
ಅತ್ತಿತ್ತ ನೋಡಿದೆನು! ಬರಿ ತೆರಹು! ಬರಿ ಶೂನ್ಯ!
ಒತ್ತಿ ಬಹ ದುಃಖದಿಂ "ಇದ್ದುದೆಲ್ಲವ ನೀನೆ
ಕೊಂಡಿರಲು ಇನ್ನೇನು? ಈಗುಳಿದ ಕೌಪೀನ-

ವೊಂದನೂ ಕೊಡು ಎಂದೊಡಾನದಕೆ ಸಿದ್ಧನೇ!”
ನುಡಿದೆ! ಅದಕು ಸಹ ಕೈ ನೀಡಿದನು! ನಗ್ನತೆಗೆ
ಮಿಡುಕದಲೆ ಎಸೆದೆ ನಾನದನು ಕಾರ್ಗತ್ತಲೆಯು-
ನುಡುತ! “ಇಂಥವತೆಯೊಳಗಾರೆನ್ನ ನೋಡುವರು?
ಒಡೆಯ, ಈ ಅಸುವನೂ ಕೊಳ್ಳೆನಗೆ ಬಾಳಿನೊಳು
ಬೇಸರವು! ನಟ್ಟಿರುಳ ಗಬ್ಬದಲಿ ಹಬ್ಬಿರುವ
ಹೇಸಿ ಬಾಳನು ನೋಳ್ಪರಾರು? ಹಾ!” ಎಂದತ್ತೆ!
“ಇದಕೇಕೆ ಚಿಂತೆ? ಅಳದಿರು ಕಂದ! ನಿದ್ದೆಯಾ
ಮದಿರೆಯನು ಕುಡಿದಿಳೆಯು ನಿನ್ನ ನಿರುಕಿಸದಿರಲು
ನೋಡಗೋ ಮುಗಿಲಲ್ಲಿ, ಸುರರ ಹಿಂಡೇ ಹಿಂಡು
ಓಡಿ ಬರುತಿದೆ ಬಿಟ್ಟ ಕಂಗಳಲಿ ನಿನಗಾಗಿ!
ಜಗವು ನೋಡದ ಜೀವಿಯನು ಮುಗಿಲು ನೋಡುವದು!
ಮಗುವೆ, ನೀ ತಿಳಿದಿದನು ಮುಂದೆ ಬಾ, ಬಾ ಮುಂದೆ!
ಈ ರಾತ್ರಿ ಸರಿಯುವದು! ನಸುನಗುವ ಹೊಸ ನಸುಕು
ದಾರಿ ನೋಡುತಲಿಹುದು ನಿನಗಾಗಿ! ಮುಂದೆ ಬಾ!”
ಎಂದ! “ಹಾದಿಯು ಸಿಗದು! ಮುಂದೆ ಸಾಗುವದೆಂತು?”
ಎಂದೆ! “ಮೆಲ್ನೋಡೆಳೆಯ ದಿವ್ಯವಾಗಿಹ ಬೆಳಕ!
ಅದ ನೋಡು! ಕಗ್ಗತ್ತಲೆಯು ಜಗವ ನೋಡದಲೆ
ಅದ ನೋಡು! ಅದರಿಂದೆ ಮುಂದೆ ಬಾ, ಬಾ!” ಎಂದ!
“ಇನಿತೆಲ್ಲ ಪೇಳುವವ ನೀನಾರು? “ಪೇಳೆಂ” ದೆ!
ಮನಕೊಮ್ಮೆ ದೇವನೊಲು ಮೇಣೊಮ್ಮೆ ಕರ್ಮನೊಲು
ಕಾಣಿಸಿದ! “ಹಾನಿಯೇಂ ಗುರುತುಸಿರಿದೊಡೆ ನಿ” ಎಂದೆ!
ಕಾಣಿಕೆಯ ಮೀರಿದನು ನನ್ನ ನುಡಿಗವನೇಕೊ!

## ಕೋರಿಕೆ.

“ ನೀನಾರು ? ನೀರಾರು ? ” ಎನುತ ಬಗೆ ಕಣ್ಬಿಟ್ಟು
ಆ ನಿಶೆಯ ಮಧ್ಯದಲಿ ಸುತ್ತಲೂ ನಿರುಕಿಸಿತು !
ಇರುಳು ಸಹ ಆತನನು ಶೋಧಿಸಲು ಸಾವಿರಾ-
ರ್ತರೆಗಣ್ಗಳಿಂ ಸುತ್ತುಮುತ್ತಲೂ ನೋಡುವೊಲು
ಎಣಿಕೆಯಿಲ್ಲದ ಚುಕ್ಕಿಗಳು ಆಗ ಮೆರೆಯುತಲಿ
ಎಣಿಕೆಯಲಿ ತೇಲುವೊಲು ಬಗೆಗಾಗ ತೋರಿದವು !
“ ನೀನಾರು ? ನೀನಾರು ? ” ಎಂಬ ಪ್ರಶ್ನೆಯು ಮಾತ್ರ
ಆ ನಿಶೆಯ ಅಡವಿಯಲಿ ಪಡಿನುಡಿಯದಾಯ್ತು !

## ಸರಳಜೀವಿಯು.

(ಒಂದು ಇಂಗ್ಲಿಷ ಕವಿತೆಯ ಅನುವಾದ)

ಜೊಳ್ಳು ಹೆಮ್ಮೆಯನ್ನು ತೊರೆದ
ಸುಳ್ಳುಕಳವುಗಳನು ಮರೆದ
ಒಳ್ಳೆ ವಿಮಲಹೃದಯಿಯವನೆ
ಸರಳಜೀವಿಯು!

೨

ಮೌನವಾಗಿ ದಿನಗಳನ್ನು
ಶಾನೆ ಸಂತುಸದಲಿ ಕಳೆದು
ಹೀನಬಯಕೆ ದುಃಖಕಳುಕ-
ದವನೆ ಬಂಟನು!

೩

ಬೇಡ ಕೋಟೆ, ಬೇಡ ಶಸ್ತ್ರ,
ಬೇಡ ಕವಚವವಗೆ, ಗುಡುಗ
ಪೀಡೆಯಿಂದಲೋಡಲವಗೆ
ಬೇಡ ಗುಹೆಗಳು!

೪

ಭೀತಿ ಬಿಟ್ಟ ನೋಟದಿಂದೆ
ವಾತಪಥದ ಯಾತನೆಗಳ

ಕೋರಿಕೆ.

ಪ್ರೇತ ದೂರ ಭೀಕರತೆಯ
ನಿಂತು ನೋಳ್ಪನು!

೫

ಹೊತ್ತು ತರುವ ಚಿಂತೆಗಳನು
ಒತ್ತಿ, ಬುದ್ಧಿ ಜ್ಞಾನಗಳನು
ಎತ್ತಿ ದಿವ್ಯ ಜ್ಯೋತಿಯೊಳಗೆ
ಬೆಳಗುತಿರ್ಪನು!

೬

ಅವನ ಗೆಳೆಯ ಸದ್ವಿಚಾರ!
ಅವನ ಧನವು ಒಳ್ಳಿತನದಿ
ಸವಿಸಿದಾಯು! ಜಗವು ಶಾಂತ
ಧರ್ಮ ಶಾಲೆಯು

೭

ಇಂತು ನಡೆದು ಕಂತುಹರನ
ಸಂತತದಲಿ ನೆನೆದು ಕೊನೆದು
ಶಾಂತ ಪಯಣವನ್ನು ಮುಗಿಸಿ
ಮಲಗಿಬಿಡುವನು

---

# ಹಾಳಾದ ಅಲವಟ್ಟಿ.



೧

ಮುಚ್ಚಂಜೆ ಮುಸುಕುತಿರೆ
ಬಿಸಿಯುಸಿರನೆಳೆಯುತಲಿ
ಆಶ್ರಮದ ಹೊರಗೆ ನಿಂತೆ!
ಕುಚ್ಚುತಿಹ ತಾಪದೊಳು
ಹಾಳುಬಿದ್ದಿಹ ಹಳ್ಳಿ-
ಯನು ಕಂಡು ಬಾಷ್ಪವಾಂತೆ!

೨

ಹಾಳು ಬಿದ್ದಿಹ ಮನೆಯು!
ಹಾಳು ಬಿದ್ದಿಹ ಓಣಿ!
ಸುತ್ತಲೂ ಹಾಳೆ ಹಾಳು!
ಜೋಲು ಬಿದ್ದಿಹ ಸೊಬಗಿ-
ನೊಳಗೇಳುತೆದೆ ಕೊರೆವ
ಬಾಳುವೆಯ ಗೋಳೆ ಗೋಳು!

೩

ಅಲ್ಲೊಂದು ಇಲ್ಲೊಂದು
ಎದ್ದಿರುವ ಮನೆಗಳಲಿ
ಜೀವ ಮಿಸುಕಾಡುತಿಹುದು!

ಸೊಲ್ಲಿಲ್ಲ! ಬಿದ್ದಿರುವ
ಹೆಣವು ಹಾ! ಮಿಸುಕಿದೊಲು
ಭಾವನೆಗೆ ಎನಿಸುತಿಹುದು!

೪

ಸುಮ್ಮನೇ ನಿಂತಿದ್ದೆ!
ಸುಮ್ಮನೇ ನಿಂತಿದ್ದೆ!
ಗಾಳಿ ನಿಡುಸುಯ್ಯುತಿತ್ತು!
ದುಮ್ಮಾನವೇ ರೂಹು-
ಗೊಂಡಂತೆ ಹಳ್ಳಿಯದು
ಕಂಗಳಿಗೆ ಕಾಣುತಿತ್ತು!

೫

ರಕ್ಕಸನ ಕಂಗಳೊಲು
ಅಲ್ಲೊಂದು ಇಲ್ಲೊಂದು
ದೀವಿಗೆಗಳುರಿದೆರ್ದ್ದವು!
ದುಕ್ಕದಾವೇಶದಲಿ
ಹಿಂದುಮುಂದುಗಳಿಲ್ಲ
ಒಂದಾಗಿ ತೋರಿರ್ದ್ದವು!

೬

ಹಿಂದಿನವರೆಲ್ಲಿದರೊ?
ಮತ್ತೆಲ್ಲಿ ಹುಟ್ಟಿದರೊ?
ಈ ತಳವು ಮರವಾಯಿತೇ?

## ಕೋರಿಕೆ.

ಸಂದಿರುವ ಕತ್ತಲೆಯು
ಎನಿತಗಿದರೂ ಕೂಡ
ನಿಷ್ಫಲವೆ ಫಲವಾಯಿತೇ?

೨

ಬೀಳಿನೊಳಗೇಳುಂಟು;
ಏಳಿನೊಳು ಬೀಳುಂಟು;
ತೆರೆಯೊಂದು ತಿಗರಿಯಂತೆ!
ಹೇಳುವೆನು ಕೊನೆಗೊಮ್ಮೆ,
“ಈ ತತ್ವವಿದೆ ಬೀಜ-
ವೃಕ್ಷಗಳ ನ್ಯಾಯದಂತೆ”!

---

# ಬಡವನೆಂದಳಲದಿರು !

ಅಳಲದಿರು ಬಡವನೆಂದಳಲದಿರು ನೀ ।
ಇಳೆಯಾಣ್ಮನಾ ದಿವ್ಯ ಸಂಪದವದಿರಲು! ॥ಪಲ್ಲ॥

೧

ಸಂಜೆ ಮುಂಜಾವುಗಳ ಹೂಬಿಸಿಲ ಹೊನ್ನು ತಾ
ರಂಜಿಸುತ ಸುತ್ತಲೂ ಸೂರೆಯಾಗಿರಲು ।
ನಂಜಿನಂತಿಹ ಜಗದ ಹೊನ್ನಿಗಾಸೆಯ ಪಡದೆ
ಅಂಜ ಹಿಂಜರಿಯುತಲಿ ನೀನದನ ಮರೆಯೈ!

೨

ಇರುಳು ಬಂತೆಂದು ಕಂಬನಿಯುದುರಿಸುವದೇಕೆ?
ಇರುಳು ತೋರುವ ಚುಕ್ಕಿ ಮುತ್ತುಗಳ ನೋಡೈ!
ತರಳ, ಬೆಳಗಾಗುತಿರಲುದುರಿಯುವು ನಿನಗಾಗಿ
ಅರಳಾಗಿ ಸೌಸವವ ಸೂಸುತಿರುತಿರಲು!

೩

ಮುಗಿಲಿನೊಳು ಮೂಡಿರುವ ಕಾಮನಾ ಬಿಲ್ಲಿನೊಳು
ಝುಗಝುಗಿಸುತಿರುವ ನವರತ್ನಗಳ ಪ್ರಭೆಯು
ಒಗೆದಿರಲು, ನೀನವನ ನೋಡಿ ನಲಿವುದನುಳಿದು
ಹಗಲಿರುಳು ಬಡವನೆಂದಳುತಿರುವದೇಕೆ?

೪

ಹಚ್ಚ ಹಸುರಿನ ಹುಲ್ಲಗದ್ದೆಯೊಳು ತಾ ಕುಳಿತು
ಅಚ್ಚ ನೀಲಿಯ ಮುಗಿಲನೇ ನೋಡಿ ನೋಡಿ

## ಕೋರಿಕೆ

ಇಚ್ಛೆಯೊಲು ಹಾಡುತಿಹ ಹಕ್ಕಿಗಳ ಸರಗೇಳಿ
ಮುಚ್ಚುದಲೆಯುಳಿದವೈಭವಕಾಸೆಯೇಕೆ?

೫

ಎಣಿಸುತಿರಲೀ ದಿವ್ಯ ಸಂಪತ್ತು ನಿನಗಿರಲು,
"ಹಣವಿಲ್ಲ! ಹಾ!" ಎಂದು ಅಳುತ ಕೂರುವರೇ?
ಹಣದ ಕೋಟಿಯ ಗಳಿಸಿ, ಇದ ಗಳಿಸದನ ಬಾಳು
ಹೆಣದ ಬಾಳ್ವೆಯೆ ಸರಿಯು! ತಿಳಿದಿದನು ನೋಡೈ!

---

# ಬೇಡಿಕೆ.



೧

ಕತ್ತಲೆಯು ನೆಲಮುಗಿಲ
ನುಂಗಿಸುತ್ತಿರಲಿ!
ಕತ್ತಲಲಿ ಬೆಳಕನರ-
ಸುವ ದೃಷ್ಟಿಯಿರಲಿ!

೨

ನೋವಿನುರಿ ನಿರುತವೂ
ದಳ್ಳಿರಿಸುತಿರಲಿ!
ನೋವಿನುರಿಯೊಳೆ ಬಗೆಯು
ಹಿಗ್ಗುತಿರುತಿರಲಿ!

೩

ಎಡರುಗಳು ಎಡಬಿಡದೆ
ಎಡೆಯಾಡುತಿರಲಿ!
ಎಡರಿನೊಳಗೆದೆಗೆಡದ
ಶಕ್ತಿಯೊಂದಿರಲಿ!

೪

ಬಿರುಗಾಳಿಯೋಲಾಸೆ-
ಗಳು ಬೀಸುತಿರಲಿ!

ಸ್ಥಿರವಾದ ತೃಪ್ತಿಯೊಂ-
ದಲ್ಲಿ ಸೂಸಿರಲಿ!

೫

ಕಷ್ಟಗಳು ನಿಷ್ಠುರದಿ
ಕಾಡುತಿರುತಿರಲಿ!
ಕಷ್ಟದೊಳೆ ಸೊಗದ ಶಾಂ-
ತಿಯು ಮೂಡಿ ಬರಲಿ!

೬

ಸೋಲುಗಳೆ ಸತತವೂ
ಗಂಟುಬಿದ್ದಿರಲಿ!
ಸೋಲಿನೊಳೆ ಗೆಲುವನರ-
ಸುವ ಬುದ್ಧಿಯಿರಲಿ!

೭

ಮಾಯೆ ನಿನ್ನಿಂದೆನ್ನ
ಮರೆಮಾಡುತಿರಲಿ!
ಮಾಯೆಯನು ಹರಿವ ನಂ-
ಬುಗೆಯನಗದಿರಲಿ!

---

# ಒಂದು ಹಕ್ಕಿಯು ಹಾಡು.



೧

ವಿಸ್ತಾರ ಪಂಜರವು ನಮ್ಮದದು ದುರ್ಗ!
ಅದೆಯಾಯ್ತು ನಮಗೊಂದು ರಂಜಿಸುವ ಸ್ವರ್ಗ!
ಅಲ್ಲೆನಿತೊ ಹಕ್ಕಿಗಳು
ಹರಡುತಲಿ ಪಕ್ಕಗಳ
ಸುತ್ತಲೂ ಹಿಂಡಾಗಿ ಹಾರುತಿರುತಿಹವು!
ಬಿತ್ತರದ ಹಾಡುಗಳ ಹಾಡುತಿರುತಿಹವು!

೨

ದುರ್ಗದಾ ತೆಂಕಣದಿ ನಮ್ಮಗಳ ಗೂಡು!
ಅಲ್ಲಿಹೆವು! ಅದೆ ನಮ್ಮಯುಮ್ಮಹದ ನಾಡು!
ಅಲ್ಲಿ ನಾವಿರುತಲಿರೆ
ಮೇಲ್ವಕ್ಕಿಯಿಂಪು ಸರ
ಕೇಳಲ್ಕೆಯದರಂತೆ ಹಾಡತೊಡಗಿದೆವು!
ಆ ಹಾಡ ಕಟ್ಟಿನೊಳೆ ಹಾರತೊಡಗಿದೆವು!

೩

ಹಾಡಿದೆವು! ಆ ಹಾಡ ಬಗೆಯೊಳೋಡಿದೆವು!
ಓಡಿದೆವು! ಕಡೆಗೆ ಬೇಸರಕೆ ಬಾಡಿದೆವು!
ಬಾಡಿದರು, ಹಿಡಿದ ಪಥ-
ವನು ಬಿಡದೆ, ಮನದ ವ್ಯಥೆ-

ಗೊಳಗಾಗಿ ಹಾಗೆಯೇ ಮುಂದೆ ಸಾಗಿದೆವು!
ಹೊತ್ತು ಪಲ್ಲಟಪಾಸೆಗೊಮ್ಮೆ ತಾಗಿದೆವು!

೪

ಮೂನ್ನಾಲ್ಕು ಶತಮಾನಗಳು ಕಳೆದು ಹೋಗೆ,
ನಮ್ಮೆಯ ನಿರೀಕ್ಷಣೆಯು ಫಲಿಸುವಂತಾಗೆ,
ಶರಣಪಕ್ಕಿಗಳೆಲ್ಲ
ವಚನಕಾವ್ಯದ ಸೊಲ್ಲ-
ನೆಲ್ಲೆಡೆಗೆ ಹಬ್ಬಿಸುತ ಹೊಸಹಾದಿದೋರೆ,
ನಮಗಾಯ್ತು ಸಂತಸದ ಸುಗ್ಗಿಯಾ ಸೂರೆ!

೫

ಈ ಸೊಗಸ ಕುಡಿಯುತಲಿ ನಾವ್ ಮುಂದೆ ಜಾರೆ,
ಕಾಲಗರ್ಭವು ನೂತನಾರ್ಭಕನ ಮೋರೆ-
ಯನು ಮತ್ತೆ ತಾ ತೋರೆ,
ಹೊಸ ಉಬ್ಬು ಮೈದೋರೆ,
ನಮ್ಮೊಳಗೆ ನೆರೆ ದಿಟ್ಟವಾಗಿರ್ದ ಹಕ್ಕಿ
ಹಾಡಿದವು ಷಟ್ಪದಿಯ ರಾಗಗಳಲುಕ್ಕಿ!

೬

ಈ ರಾಗ ಈ ತಾಳಗಳಲಿ ನಾವ್ ಕುಣಿದು,
ಸರವೆತ್ತಿ ಏಸೊ ದಿನ ಹಾಡಾಡಿ ತಣಿದು,
ಕಡೆಗೊಮ್ಮೆ ಬಲು ದಣಿದು,
ಹೊಸತಕ್ಕೆ ಮನ ಮಣಿದು,
ಪಲ್ಲಟನೆ ಪತ್ತ್ರಗತಿಯೊಂದಂದರಿದೆವು!
ಒಳ್ಳೆ ಹೊಸ ಹಾದಿ ಹಿಡಿದು ಹಾತೊರೆದೆವು!

## ಕೋರಿಕೆ

೭

ಪಲ್ಲಟಿಕೆ ಮನಸೋತ ಹಕ್ಕಿಗಳು ಕೆಲವು
ದುರ್ಗದಾಚೆಗೆ ಕೂಗುವಕ್ಕಿಗಳ ಉಲುಹ
ಕೇಳಿದವು! ಬಹು ದೂರ
ಹಾರಿದವು! ಮುನ್ನೀರ
ಗಾಂಭೀರ್ಯದಲಿ ಬೆರೆತ ಸರಕೆ ಕಿವಿಗೊಟ್ಟು,
ಕಡಲಾಳ ಭಾವಗಳ ಬಗೆಗೆ ಬಗೆಗೊಟ್ಟು!

೮

ಕಡಲಿನಾಚೆಯೊಳಿರ್ಪ ಹಕ್ಕಿಗಳ ತೆರದಿ
ಹಾಡತೊಡಗಿದವಿಂತು! ಈ ಹಾಡು ಭರದಿ
ಸುತ್ತಲೂ ಪಸರಿಸಿತು!
ಹೊಸ ಸವಿಯನೊಸರಿಸಿತು!
ಹಳತಕ್ಕೆ ಬೇಸತ್ತ ಹಕ್ಕಿಗಳು ಸೇರಿ
ಈ ಸವಿಯ ಕುಡಿಕುಡಿದು ಹಾಡಿದವು ಹಾರಿ!

೯

ನಾನೊಂದು ಗೂಡಿನಲಿ ಕಣ್ಬಿಡುತ ಕುಳಿತು
ನನ್ನ ಭಾಗ್ಯೋದಯವು ಬರ್ಪುದೆಂತೆನುತ
ಎಣಿಸುತಿರೆ, ಹೊಸ ವೇಷ-
ಹೊಸ ಭಾವದಲಿ ತೋಷ-
ವಡೆಯುತಲಿ ನನ್ನ ಭಾಗ್ಯೋದಯವು ಬಂತು!
ಹಾಡತೊಡಗಿದೆನಿಂದು ಬಡವಕ್ಕಿಯಿಂತು!

---

# ಉದಯಾಸ್ತ.



ನೇಸರು ಜಾರೆ,
ಕತ್ತಲು ತೋರೆ,
ಹೊರಗಡೆ ಕುಳಿತೆನು ಬಗೆಯುರುಳೆ!
ಸುತ್ತಲು ಚುಕ್ಕಿ
ಕತ್ತಲೊಳುಕ್ಕಿ
ತೇಲ್ದವು ಬಾನೊಳು ಸೊಗಗುಳ್ಳಿ!

ಇರುಳಿನ ತಿರೆಯು
ಕಣ್ಣಿಗೆ ಬರಿಯು
ದ್ವಂದ್ವಪ್ರಪಂಚವ ಬೀರಿತ್ತು!
ಒಳಗಿನ ಮನವು
ಭೇದಿಸಿ ತಮವ
ದ್ವಂದ್ವಪ್ರಪಂಚವ ಮೀರಿತ್ತು!

ಕುಳಿತೇ ಕುಳಿತೆ!
ಬಾನೊಳು ತಳಿತ
ತಾರೆಗಳಲಿ ಕೆಲವೇರಿದವು!
ಜಾರ್ದವು ಕೆಲವು!
ಸಾರ್ದವು ಕೆಲವು
ತಿಮಿರದಿ ಕೆಲಕೆಲವಾರಿದವು!

## ಕೋರಿಕೆ

ಸುಖದುಃಖಗಳು
ಪ್ರತಿಭಟಿಸುವೊಲು
ಬಗೆಗಾ ನೋಟವು ಹೊಳೆದಿತ್ತು!
ನೋಡೀ ಪರಿಯು
ಎನ್ನಯ ಬಗೆಯು
ನಿತ್ಯ ಸ ಖಾಸೆಯ ತಳೆದಿತ್ತು!

ಕಳ್ತಲೆಯೋಡಿ,
ತಣ್ಣೆಲರಾಡಿ
ಪೊಳ್ತರೆ ಬರವನು ಸೂಚಿಸಿತು!
"ಬೆಳ್ವೆಳಗಾಗಿ
ಹೊಂಗೈ ಜೋಗಿ
ಬಹನೆನ್ನ"ತ ಬಗೆ ಯೋಚಿಸಿತು!

ಮೂಡಣಗೆಂಪು
ನಸುಕಿನ ತಂಪು
ಭಾವನೆಗುತ್ಸವನೊದಗಿಸಿತು!
ಮುಸುಕಿದ ಮುಸಕ
ಮನಕಿಹ ಮುಸಕ
ಹರಡುವ ಬೆಳಕದು ಹುದುಗಿಸಿತು!

ಅಲರುಗಳರಳಿ
ಖಗಗಳು ಮರಳಿ
ಕಂಪನು ಇಂಪನು ಬೀರಿದವು!

## ಕೋರಿಕೆ

ಮಲಗಿದ ತಿರೆಯು
ಬಾನಿನ ತೊರೆಯು
ಶಾಂತಿಯ ಪ್ರಭೆಯಲಿ ಜಾರಿದವು!

ಸೂರ್ಯನು ಮೂಡಿ
ಎಳೆನಗೆಗೂಡೆ,
ಧರೆಯುರಳಿದೆ ದ್ವಂದ್ವವ ನೀಗಿ!
ಹೃದಯವು ನಲಿದು,
ಬೆಳಕದು ಬಲಿದು,
ಧರೆ ನಿಂತಿದೆ ತಾ ಶಿರವಾಗಿ!

* * * *

ಜ್ಞಾನದ ರವಿಯು
ಬೆಳಗಲು ಭುವಿಯು,
ದ್ವಂದ್ವವ ಕಳೆದದು ನಲಿಯುವದು!
ಜ್ಞಾನದ ರವಿಯು
ಮುಳುಗಲು, ಭುವಿಯು
ದ್ವಂದ್ವದಿ ನರಳುತಲಲೆಯುವದು!

# ಚಿಕ್ಕ ತಿಮ್ಮ

## (ಒಂದು ಇಂಗ್ಲಿಷ ಕವಿತೆಯ ಅನುವಾದ)

೧

ಚಪ್ಪರ ಗುಡಿಸಲು! ಒಳಗಡೆ ನಿರ್ಮಲ!
    ಹೊರಗಡೆ ಬಿದ್ದಿರುವದು ಜೋಲು
ಅಪ್ಪಳಿಸಿತು ಕಾರ್ಗತ್ತಲ ರಾತ್ರಿಯು!
    ಬುಸುಗುಟ್ಟಿತು ಬಿರುಗಾಳಿ ಬಲು!

೨

ತಾಳ್ಮೆಯ ತಾಯಿಯು ಸಾಯ್ವಣುಗನ ಸೆ-
    ಜ್ಜೆಯ ಬಳಿಯಲ್ಲಿಯೆ ಕುಳಿತಿಹಳು
ನಲ್ಮೆಯ ಬಾಲನು ಸೊರಗಿಹನಕಟಾ!
    ಕಳೆಯುಳಿದಿವೆ ಹಾ! ಕಣ್ಣುಗಳು!

೩

ಒಬ್ಬನೆ ಪುತ್ರನು! ಪ್ರೀತಿಯ ಪುತ್ರನು!
    ತಿಮ್ಮನು ಎಂದಾತನ ಹೆಸರು!
ಹಬ್ಬಿದ ಮಬ್ಬಿನೊಳೊರಗಿಹನಯ್ಯೋ!
    ಮೇಲ್ಕೆಳಗಾಗುವದವನುಸಿರು!

೪

ದೇವಗೆ ಬೇಡುತ ಕಣ್ಣೀರ್ಸುರಿಸುತ
    ಬಗೆಬಗೆಯಲಿ ತಾ ಯೋಚಿಪಳು!

ಜೀವದ ಜೀವವು ನಿದ್ದೆಗೆಡುವದೆಂ-
ದಿಹಳಾಕೆಯು ಕಡು ಮೌನದೊಳು!

೫

ಎದೆಯನು ತುಂಬುತ ತುಳುಕುತಲುಕ್ಕುತ-
ಲಿರುವದು ತಾಯಿಯ ಪ್ರೇಮವದು!
ಒದವಿದ ತಾಪದಿ ಕೈಮೇಲ್ಚಾಚುತ
ಮೊರೆಯಿಡುವಳು ನೀ ನಿರುಕಿಸದೋ!

೬

"ಮಗನನ್ನುಳಿಸುತಲೆನ್ನನು ಕೊಳ್ಳೈ'
ಎಂದವಳೀಶಗೆ ಬೇಡುವಳು!
"ಮಗುಳನು ಮರಿವರೆ! ಕಾಯನು ಹರಿವರೆ?"
ಎಂದೊರಲುತ ಹಾ! ಬಾಡುವಳು!

೭

ಈ ಪರಿಯಳುತಿಹ ತಾಯಿಯ, ಸಾಯುವ
ಕಂದನ ಮೆಲ್ದನಿ ಸೆಳೆದತ್ತು!
"ಒಪ್ಪುವ ನಗೆಯೊಳಗೆನ್ನನ್ನಪ್ಪಲು
ದೇವದೂತರಗೆ ಬಹರಿತ್ತು!

೮

"ಒಣಗಿದೆ ಗಂಟಲು! ಎನ್ನಯ ತಾಪವು
ಬಯಲಾಗುತಲಿದೆ ನೋಡಮ್ಮಾ!
ಹನಿಸೌ ಬಾಯಲಿ ನೀರ್ಗುಟುಕೊಂದನು!
ಅಳಬೇಡೌ" ಎಂದನು ಶಿವಮ್ಮಾ!

೯

ಕಂಪಿಪ ಕೈಯಲಿ ನೀರಿನ ಬಟ್ಟಲ
ತಿಮ್ಮನ ಬಾಯಿಗೆ ಹಚ್ಚಿದಳು!
ಸೊಂಪಿನ ನಗೆಯೊಳಗವಳನು ಮನ್ನಿಸಿ
ಗುಟುಕಿಸಿದನು ಮುಗ್ಗುಟುಕ ಜಲ!

೧೦

"ಕೆಲಸವ ತೀರಿಸಿ ಬರಲಪ್ಪನು ಪೇ-
ಳಾತನಿಗೆನ್ನಯ ವಂದನೆಯ!
ಮಲಗುವೆನಮ್ಮಾ! ದೇವರ ಹೊರೆಗೆಂ-"
ದೆನುತಡಗಿತು ತಿಮ್ಮನ ದನಿಯು!

೧೧

'ಮಿಣಿಮಿಣ' ಸೊಡರಿನ ಬೆಳಕಲಿ ಸಾಯುವ
ತನುಜನ ಮೊಗವನು ನೋಡಿದಳು!
ಕೊನೆಯಲಿಯಾತನು ನುಡಿದಿಹ ನುಡಿಗಳ-
ನೆಂದೂ ಕೇಳಲು ಬಯಸಿದಳು!

೧೨

ತೆರೆಯಿತು ಗುಡಿಸಲ ಬಾಗಿಲು! ನಲ್ಲನ
ಹೆಜ್ಜೆಯ ಸೊಪ್ಪಳು ಕೇಳಿಸಿತು!
ಒರೆಯದಲೊಬ್ಬರನೊಬ್ಬರು ನೋಳ್ಪರು!
ದುಃಖದ ಮೌನವು ಕೇಳಿಸಿತು!

೧೩

ಎಲ್ಲವು ಮುಗಿದಿಹುದೆಂಬುದ ಬಲ್ಲನು!
ಮಗನಳಿದುದು ಅವನಿಗೆ ಗೊತ್ತು!

ಮೆಲ್ಲನೆ ಕೈಯಲಿ ದೀಪವ ಪಿಡಿಯುತ
ಸಾರ್ದನು ಮಗನೊರಗಿರುವತ್ತ!

೧೪

ಬಚ್ಚಿಡಬಯಸಿದ ದುಃಖದ ಭಾರದೊ-
ಳಾತನ ತುಟಿಗಳು ನಡುಗಿದವು!
ನಚ್ಚಿನ ಮಡದಿಯು ಪತಿಯನು ಸಾರ್ದಳು!
ಇಬ್ಬರ ದನಿಗಳು ಕೂಡಿದವು!

೧೫

ಶೋಕದ ಭಾರಕೆ ಬಾಗಿದ ಹೃದಯದೊ-
ಳೀಶಗೆ ಮೊರೆಯಿಡುತಿಹರವರು!
"ನಾಕದೊಳಾದರು ಮಗನನು ಕೂಡಿಸು"
ಎಂದಡಿಗಳಿಗೆರಗುತಲಿಹರು!



# ಪ್ರಾರ್ಥನೆ.

೧

ಬೆಳ್ಮುಗಿಲಿನಿಂದಿಳಿವ ಸೊದೆವನಿಗಳಂತೆ
ಕಡಲಾಳದಿಂದೊಗೆವ ಮಣಿಗಣಗಳಂತೆ
ಕಲ್ಪತರುವಿಂ ಜಗುಳ್ವ ಕಮ್ಮಲರಿನಂತೆ
ಐಸಿರಿಯುಡಿಯ ದಿವ್ಯ ಸರಪಳಿಗಳಂತೆ
ವಿಶ್ವವನು ಬಂಧಿಸಿದ ಮಾಶಕ್ತಿಯಂತೆ
ಲೋಕದಿಂ ನಾಕಕಿಹ ನಿಶ್ರೇಣಿಯಂತೆ
ಎಲ್ಲೆಲ್ಲು ಪಸರಿಸಿಹೆ ಪ್ರಾರ್ಥನೆಯು ನಾನು!
ಎಲ್ಲರಿಗು ಸುಲಭವಾಗುತ ನಿಂತಿರುವೆನು!

೨

ನನ್ನಿಂದೆ ಕಾರಿರುಳು ಬೆಳಕ ಕಂಡಿತ್ತು!
ನನ್ನಿಂದೆ ಶೂನ್ಯತೆಯು ಪೂರ್ಣತೆಯುದಾಯ್ತು!
ನನ್ನಿಂದೆ ಜಡವೆಲ್ಲ ಚೇತನವದಾಯ್ತು!
ನನ್ನಿಂದೆ ದುರ್ಲಭವು ಬಹು ಸುಲಭವಾಯ್ತು!
ಅಸುರನರಸುರರೆಲ್ಲ ನನ್ನಿಂದೆ ತಾವು
ಹೊಂದಿದರನಾಯಾಸದಿ ಬಗೆವಯಕೆಡಾವ!
ನನ್ನಿಂದೆ ಬಾಲಕರು ಶಾಶ್ವತದ ಪದವ
ಪಡೆದು ಕುಡಿಯುತಲಿಹರು ನಿತ್ಯ ಸಮ್ಮುದವ!

೩

ಆ ಕೂಟ ನೋಟವಾಟಗಳಾಂತು ನಾನು
ತಲೆವಾಗಿ ಕೈಜೋಡಿಸುತ ನಿಂತಿರುವೆನು!
"ಬೇಕಾದುದೆಲ್ಲವನು ನಾ ನಿಮಗೆ ತರುವೆ!"
ಎಂದೆನುತ ಜಗವನ್ನು ದೈನ್ಯದಲಿ ಕರೆವೆ!
ಎನ್ನ ದೀನತೆಯು ಮೋಲ್ದನಿಗೆ ಕಿವಿಗುಡದೆ,
ಎನ್ನಯದ್ಭುತ ಲೀಲೆಗೂ ಬಗೆಯ ಕುಡದೆ,
ಲೋಗವಿದು ಹಾಗೆಯೇ ಸಾಗಿರುವದೇನೋ?
ದೈನ್ಯಕೀ ಧಾರಿಣಿಯೊಳಿಂಬಿಲ್ಲವೇನೋ!

---

# ನೀತಿ.



೧

ಬಟ್ಟಬಯಲು ಗಟ್ಟಿಗೊಂಡು,
ಸೃಷ್ಟಿಯೆಂಬ ರೂಹುಗೊಂಡು,
ಅರುಹಮೆರುಗಿನಲ್ಲಿ ತಾನು
ಮೆರೆಯತೊಡಗಿತು!
ನೀತಿಯಾಗ ತುಂಬ ಮೂಡಿ
ಹರಿಯತೊಡಗಿತು!

೨

ಆತನೆಡೆ, ಸುನೀತವಾಗಿ,
ಪ್ರೀತಿಯಲಿ ಪುನೀತವಾಗಿ,
ಸೇರ್ವ ಬಗೆಗೆ ನೀತಿಯದುವೆ
ಪಥವದಾಯಿತು!
ನೀತಿಗೋತು ನಡೆವ ಬಗೆಯೆ
ರಥವದಾಯಿತು!

೩

ನೀತಿಪಥವು ಸುತ್ತುಮುತ್ತು
ಒಳಗು ಹೊರಗು ಮೇಲೆ ಹತ್ತಿ
ಎಣಿಕೆಯಾಚೆಗೊಡೆದು ಕವಲ-
ನಂತವಾಯಿತು!

ಅದರ ಅಂತ ಕಾಣ್ವುದಿಳೆಯು
ಪಂಥವಾಯಿತು!

೪

ನೀತಿಪಥದೊಳೆನಿತೊ ದೂರ
ನೀತವಾದ ಜಗವು ಪರ-
ನೇರುತೇರುತೊಂದೆ ಸಮನೆ
ಹೆಣಗುತಿರುವದು!
ಜಾರಿ ಕಾಲು, ಮತ್ತೆ ಹಾಗೆ
ಹೆಣಗುತಿರುವದು!

೫

ನೀತಿಮಾರ್ಗದೇರೆ ಧರ್ಮ!
ಅದನು ಪಿಡಿವುದಿಳೆಯ ಕರ್ಮ!
ಪಿಡಿದನಂತವಾದ ಅಂತ.
ವನ್ನು ಪಡೆವುದು!
ಪಡೆದು ನಿಚ್ಚ ಸೊಗದ ಶಾಂತಿ-
ಯನ್ನು ಕುಡಿವುದು!

---

# ಹೇಳಲಾರದ ದುಃಖ



ಆವ ದುಃಖವೊ ಏನೊ
ಜೀವನದಿ ತಾ ಹುದುಗಿ
ಭಾವದಲೆಗಳನಿಂದು ಎಬ್ಬಿಸುವದು!
ಸುಮ್ಮನಿರಲೂ ಬರದು!
ಒಮ್ಮೆಯಾದರು ಅತ್ತು
ದುಮ್ಮಾನವೊರೆಯನಿಳಿಸಲು ಬಾರದು!

ಹೊರಗು ತಾ ಹೊರಡದಲೆ
ಸರಿಯದಲೆ ಒಳಗು ಹಾ!
ಕೊರಲ ಸೆರೆಯನು ಬಿಗಿದು ಗೋಳಿಸುವದು!
ಬಾಲ್ಯದಾ ನೆನಹೇನೊ
ಶಲ್ಯದೊಲು, ಬಗೆಯ ವೈ-
ಕಲ್ಯವಡಿಸುತಲಿಂತು ನೋಯಿಸುವದು!

ಗೆಳೆಯರಗಲಿಕೆಯೇನೊ
ಒಳಗೆಂತೊ ಹರಿದಾಡಿ
ತಳಮಳದೊಳೆನ್ನ ಹಾ! ನೂಕುತಿಹುದು!
ಸತ್ತವರ ಸ್ಮರಣವೋ
ಸುತ್ತುತೆನ್ನಯ ಬಗೆಯ-
ನೊತ್ತಿ ಬೇಗುದಿಯಾಗಿ ಹರಿಯುತಿಹುದು!

ಗತಕಾಲಸುಖಕೆ ಸ್ವಾ-
ಗತವಿತ್ತು ಮತ್ತೊಮ್ಮೆ
ಸತತವೂ ಅದನುಣ್ಣ ಬರಿಯಾಸೆಯೋ!

ಕೊಂಡ ಉಪಕಾರವನು
ಉಂಡ ಆ ಪ್ರೇಮವನು
ಕಂಡುಕಂಡೂ ಮರಳಿಸದಿಹ ನೋವೋ!
ಕಾಣಿಕೆಯು ಆಚೆಯುನು
ಕಾಣಬೇಕೆಂದೆನುತ
ಮಾಣದೀ ಪರಿಯೊಳಿಹ ಬಗೆವಂಬಲೋ!

ಆವಾವರೀತಿಯುಲು
ಭಾವಿಸಿದರೂ ಕೂಡ
ತೀವಿದೀ ಬೆಸನದಾಳವನರಿಯೆನು!
ಮರುವಿನಲಿ ನಿಂತಿರುವ
ಹರಿಣಕೆಲ್ಲಿಂದಲೋ
ಶರವು ನಟ್ಟಂತೆ ನಾ ಮರುಗುತಿರುವೆ!

ಮರದಿ ಕುಳಿತುಬ್ಬಿನಲಿ
ಮೊರೆವ ಹಕ್ಕಿಗೆ, ಗಿಡಗ-
ವೆರಗಿದೊಲು, ಈ ದುಃಖವೆನಗೆರಗಿದೆ!
ಹೇಳಲಾರದ ದುಃಖ-
ದಾಳದಿಂದಾವ ಸೊಗ-
ವೇಳುತಲಿ ತೇಲುವದೊ ತಿಳಿಯೆ ದೇವಾ!

---

# ತಿಳಿದು ನೋಡು!

(ಒಂದು ಇಂಗ್ಲಿಷು ಕವಿತೆಯ ಆಧಾರದಿಂದ.)

೧

ಕಣ್ಣುಗಳೆರಡು,
ಬಾಯ್ತಾನೊಂದು,
ಏನಿಹುದಿದರರ್ಥ?
"ಇಮ್ಮಡಿ ನೋಡೈ,
ಒಮ್ಮಡಿಯಾಡೈ,"
ಎಂಬುದೆ ಇದರರ್ಥ!

೨

ಕರ್ಣಗಳೆರಡು,
ಬಾಯ್ತಾನೊಂದು,
ಏನಿಹುದಿದರರ್ಥ?
"ಇಮ್ಮಡಿ ಕೇಳೈ,
ಒಮ್ಮಡಿ ಹೇಳೈ,"
ಎಂಬುದೆ ಇದರರ್ಥ?

೩

ಹಸ್ತಗಳೆರಡು,
ಬಾಯ್ತಾನೊಂದು,
ಏನಿಹುದಿದರರ್ಥ?
"ಇಮ್ಮಡಿ ಗಳಿಸೈ,
ಒಮ್ಮಡಿ ಬಳಸೈ"
ಎಂಬುದೆ ಇದರರ್ಥ!

# ಬಾಳ್ವಣ್ಣ.



ಹದಗೊಳಿಸಿದ ನೆಲಕೊಳ್ಳೆಯು ಕಾಲವು
ಒದಗಿಸೆ ಮಳೆಯನು, ಮೊಳೆಯಲಿ ಜೀವವು!
ಮೊಗ್ಗೆಯ ತೆರದಲಿ ಹಿಗ್ಗಲಿ ಬಾಲ್ಯವು!
ಕಮ್ಮಲರಂತರಗಳಲಿ ನವಪ್ರಾಯವು!
ಕಾಯಾಗೆಸೆಯಲಿ ಪ್ರೌಢಾವಸ್ಥೆಯು!
ಹಣ್ಣಿನೊಲೊಗೆಯಲಿ ವೃದ್ಧಾವಸ್ಥೆಯು!
ಪಾಡಾಗುತೆ ಕಳಿತಿಹ ಹಣ್ಣಿನೊಲು
ಕಳಚಲಿ ಜಗಹಿತಕೆನ್ನಯ ಬಾಳು!



# ಗೂಬೆಯ ನರಳಾಟ!

೧

ಸುಡುಗಾಡಿನೆದೆಯಲ್ಲಿ ಬರಲಗಿಡದಮದಿಯಲ್ಲಿ
ಅದೊ ನೋಡು, ಆ ಗೂಬೆ ನಿಟ್ಟುಸಿರ ತಿದಿಯಲ್ಲಿ
ಒದರುತಿದೆ! ಬಿಡುವುಗುಡದೊದರುತಿದೆ! ಇರುಳೆಲ್ಲ
ಭೀತಿ ವಿಸ್ಮಿತವಾಗಿ ಕಣ್ಬಿಟ್ಟು ನೋಡುತಿದೆ!
ಮೂಗುವಟ್ಟಾಲಿಸುದು ಏಕಾಂತ ಮೌನವದು!
ಆವ ಬಗೆಗಳನೆಲ್ಲಿ ತೇಲಿಪುದು ಈ ಸೊಲ್ಲು?

೨

"ಗಾಢಾಂಧಕಾರದಲಿ ನಿಶ್ಶಬ್ದದಾಳದಲಿ
ಗೂಗೆ, ಗೂಗುಡುಗೇಕೆ ಶೂನ್ಯಪಾತಾಳದಲಿ?
ನಿನ್ನ ಘೂತ್ಕೃತಕಿಳಿಯ ನಾಳನಾಳಗಳಲ್ಲಿ
ತುಂಬು ತುಂಬುತಲಿಹವು ಬೆಚ್ಚು ಬೆರಗುಗಳಲ್ಲಿ!
ವಿಕೃತ ರೂಪಕೆ ಜಗವು ಕಣ್ಮುಚ್ಚಿ ಸರಿಯುವದು!
ಭೀಷಣ ನಿನಾದಕ್ಕೆ ಬಗೆಗಿವಿಯು ಬಿರಿಯುವದು."

೩

"ಓ ಗೆಳೆಯ, ಬಲ್ಲೆಯಾ ಎನ್ನ ಹೃದಯದ ತೀಕ್ಷ್ಣ
ಯಮಯಾತನೆಗಳ ದಳ್ಳುರಿಯ? ಈ ಅತ್ಯುಷ್ಣ
ನಿಶ್ವಾಸವದರ ಕರ್ವೊಗೆಯಂತೆ ಪೊಣ್ಮುತಿದೆ!
ಯುಗಯುಗಗಳಳಲೆ ಭೀಕರರವದೊಳಣ್ಮುತಿದೆ!

ಉಗ್ರನರಕದ ಬೀಳಿನಲಿ ನರಳ್ವ ಮರುಳಂತೆ
ಕತ್ತಲೆಯ ಗೋಳಿನಲಿ ನರಳುತಿಹೆ ಮರುಳಾಂತು!

೪

"ದಿನದಿನವು ದಿನದಿನವು ಈ ತಮದ ಮೇಳದಲಿ
ತಡವರಿಸುತೆಡವೆಡಹುತಿಹ ಬಾಳ ತಾಳದಲಿ
ಜೀವವಿದು ಓ ಗೆಳೆಯ, ಬೇಸತ್ತು ಹೋಗಿಹುದು!
ನೋಟವಿದು ತಮವನುಂಡುಂಡು ಕುರುಡಾಗಿಹುದು!
ಭಾವವೂ, ಭಾವೇಕ್ಷಣದಿ ಬೆಳಗುವಾಸೆಗಳು
ಕಾಣದಿರಲಿನ್ನೆಲ್ಲಿ ಹಾ! ಬೆಳಕ ಬಾಸೆಗಳು?

೫

"ಹೇ ದೇವ, ಈ ತಮದೊಳಿಂತು ನಾನಳಿಯಲೇ?
ಬಾಳ್ಗೆ ಪಲ್ಲಟವಿಲ್ಲದಿಂತು ನಾನಳಿಯಲೇ?
ಇನ್ನೆನಿತು ಕಾಲವೀ ತಿಮಿರದಲಿ ಕಳೆಯುವದು?
ಇನ್ನೆಂದು ಕಣ್ಣ ಕಾರ್ಗತ್ತಲೆಯ ತೊಳೆಯುವದು!
ತಮದಾಚೆ ಹೊಳೆಹೊಳೆವ ನಕ್ಷತ್ರಗಳ ನೋಡಿ
ಇರುಳಾಚೆಗೊಗೆವಿನನ ಸಾರುವದು ಬಗೆಯೋಡಿ!

೬

"ಇನನದೋ ಮೂಡಿಬರೆ, ತಿರೆಯೆಲ್ಲ ಹಿಗ್ಗುತಿರೆ,
ಸೋಗೆ ಕುಣಿದಾಡುತಿರೆ, ಕೋಗಿಲೆಯು ಕೂಗುತಿರೆ,
ಗಿಳಿಯು ಮಾತಾಡುತಿರೆ ಯಳಿಯೋಳಿ ಹಾಡುತಿರೆ,
ಮಲರುಗಳು ಅರಳುತಿರೆ, ನಲವ ಹಾ! ತೇಲಿಬರೆ,

ಸೊಗಸಂತೆ? ಸೊಗವಂತೆ? ಬಹುದು ಅಂತಿರಬಹುದು!
ಕಣ್ಗೆ ಕತ್ತಲಗೂಡಲೆನಗೆ ಹಾ! ಇದು ಬರಿದು!

೭

"ಅಯ್ಯಯ್ಯೊ! ಹೊರಗತ್ತಲಿಂದೆಯೊಳಗತ್ತಲೆಯು
ಹಿರಿದು! ಬಲು ಹಿರಿದು! ಹಾ! ಭೀಕರದ ಬಲ್ವಲೆಯು!
ಸುತ್ತೆಲ್ಲ ಹೊಸ ನಸುಕ ಬೆಳಕು ಹರಿದಿದ್ದರೂ,
ಇನನುದಿಸಿ ಬಹನೆಂಬುದಿದು ಸತ್ಯವಿದ್ದರೂ,
ಎನಗೇನು? ಓ ದೇವ, ಈ ಪಾಪಿಗೇನಗೇನು?
ಒಳಗೆ ಕತ್ತಲೆಯಿರಲು ಹೊರಬೆಳಕಿನಿಂದೇನು?

೮

"ಹೇ ದೇವ, ಸೂರ್ಯನೇ ದಿವ್ಯಕರಸ್ಪರ್ಶದಿಂ
ಒಳಗತ್ತಲನು ಹರಿದು ಸುಪ್ರಭೆಯ ವರ್ಷದಿಂ
ಎನ್ನ ಬಾಳನು ತೊಳೆದು, ಶಾಶ್ವತದ ಹಿಗ್ಗಿನಲಿ
ಶುಕಪಿಕಮಯೂರಾದಿ ವಿಹಗಂಗಳೊಗ್ಗಿನೊಲು
ಆಡಿ ಹಾಡುತ ಕುಣಿದು ಹಾರಾಡಿ ನಿನ್ನೆದುರು
ಗೊಳ್ಳುವೊಲು ಕುದುರಿಸೈ ಎನ್ನ ಭಾವಕೆ ಚದುರ!

೯

"ನಿಬಿಡಾಂಧಕಾರದಲಿ ನಾನಿಂತು ಕುಳಿಕುಳಿತು,
ದುಃಖದುದ್ವೇಗದಲಿಯೊಂದೆ ಸಮನಳುತಳುತ
ಲಿರಲೆಲ್ಲಿ ಪ್ರಾಸಗಣಯತಿ ನಾದಮಾಧುರ್ಯ?
ಕವಿತೆಗಿಹ ಸದ್ಭಾವ ಗಾಂಭೀರ್ಯ ಸೌಂದರ್ಯ?
ಅಳುವದೇನಂತರಾತ್ಮನ ದುಃಖಭಂಜನೆಗೊ
ಇಲ್ಲದೊಡೆ, ಓ ಗೆಳೆಯ, ಜನಮನೋರಂಜನೆಗೊ?

---

# ಇರುಳೆ ಬಾರ.



೧

ಬಾನಿಂದೆ ಮೌನದಿಂದಿಳಿಯುತಲಿ ಕಾರಿರುಳೆ,
ಮೆಲುನಡೆಯೊಳೆನ್ನನಾವರಿಸ ಬಾರ!
ಬೆಳಗಾಗಲರಳಿ, ಕಂಪನು ಬೀರಿ ಮಧುವೀಯೆ,
ಮೊಗ್ಗೆಗಿತ್ತುಪದೇಶವೆನಗೆ ಸಾರ!

೨

ಪದ್ಮಾನುಪದ್ಮ ದಿವ್ಯಜ್ಯೋತಿಗಳ, ಸೆರಗಿ
ನಲೆಯೊಳಡಗಿಸಿ ನಿಂತು ಮೆರೆವ ದೇವೀ,
ಕಣ್ಣನೊಳ ಹೊರಳಿಸುತನಂತ ಜ್ಯೋತಿಪ್ರಭೆಯ
ಕಾಣುವಂತೆಸಗೆನ್ನನೊಲವ ತೀವಿ!

೩

ಕೀಸರಕೆ ಕಿವಿಗುಡದೆ, ಬೇಸರಕೆ ಬಗೆಗುಡದೆ,
ಮೌನದೆಚ್ಚರದಿ ಶಾಂತಿಯ ತತ್ವವ
ಪಿಡಿವಿರುಳ ಕನ್ನಿಕೆಯೆ, ಕರುಣಿಸೌ ಬಾಳಿನೊಳು
ನಿನ್ನ ಬಗೆಯನೆ ಕಾಣುತಿಹ ಸತ್ವವ!

೪

ಬೆಳ್ವಗೆಯೊಳೆಡೆವಿಡದೆ ಧ್ಯಾನಿಸುತ ಧ್ಯಾನಿಸುತ
ಕೊನೆಗೆ ನೀ ಬೆಳ್ವೆಳಗದಾಗುವಂತೆ,

## ಕೋರಿಕೆ

ಬಾಳುವೆಯ ಕಷ್ಟಗಳ ಕಳೆದು ಬೆಳ್ವೆಳಕಾಗೆ,
ನೀಡು ಬಲವಾತನನು ಧ್ಯಾನಿಪಂತೆ!

ೠ

ಇಂತಿರಲು, ಇರುಳೆ, ನೀನೆನಗೆ ಬೇಕು!
ನೀನಿಲ್ಲದಿರಲೆಲ್ಲಿ ಬಾಳ ಬೆಳಕು?

---

# ಮಿತ್ರ.



ಮಿತ್ರನೇ, ನೀ ಬರುವ ಮೊದಲೆನ್ನ ಬಾಳು
ಬೀಳೀಳು ಗೋಳುಗಳ ಕತ್ತಲೆಯ ಕಾಳು!
ನೀ ಬಂದು ಮೊಗದೋರಲರಳಿತೆನ್ನೆದೆಯು!
ಸುರಿಯಿತಾ ಕಂಪಿಂಪು ಸೊಂಪುಗಳ ಸೊದೆಯು!
ನಲವೇರಿ ನಿನ್ನೆಡೆಗೆ ಧಾವಿಸುತ ಬಂದೆ!
ಕೈ ಚಾಚಿ ರಾಗದೊಳಗೆನ್ನಪ್ಪ ಬಂದೆ!
ನಿನ್ನಿಂದ ಬಾಳುವೆಗೆ ಸಮನಿಸಿತು ಕಳೆಯು!
ಅಗಲಿ ಮುತ್ತಿದನು ನೀನಳಿಸದಿರು ಕೆಳೆಯು!
ಆಟದಲಿ 'ನೀನಾರು' ಎಂಬುದರಿಯದಲೆ
'ಮಿತ್ರ, ಮಿತ್ರಾ!' ಎಂದು ಕರೆದೆ ಸಲಿಗೆಯಲೆ!
ಆಡಿದೆವು ಕೂಡಿದೆವು ಮನಕೆ ಮನ ಹಚ್ಚಿ
ಬಾಳುವೆಯ ಗುಟ್ಟುಗಳ ತೋರಿದವು ಬಿಚ್ಚಿ!
ಆಟವದು ಮುಗಿಯೆ ನಾ ನೋಡಿದೆನು ಮೇಲೆ!
ಅಚ್ಚರಿಯು! ಅಚ್ಚರಿಯು! ಅದ್ಭುತದ ಲೀಲೆ!
ಕೊನೆ ಮೊದಲು ಇಲ್ಲದಿಹ ಝಗಝಗಿಪ ಜ್ಯೋತಿ!
ವಿಶ್ವವನೆ ಆಕರ್ಷಿಸುವ ದಿವ್ಯ ಪ್ರೀತಿ!
ಕಣ್ಣಿಕ್ಕಿ ಕೌತುಕದಿ ಜಗವು ತಲೆವಾಗಿಹುದು!
ಸುತ್ತಲೂ ಸುಮ್ಮಾನ ಮೋನವೇ ಬೀಗಿಹುದು!
ಮಾತುಡುಗಿ ವಿಸ್ಮಯವೆ ಬಾಯ್ದೆರೆಯುವಂತೆ,
ಆತನೆಡೆ, ವೈಮರೆತು, ಮನಮರೆತು ನಿಂತೆ!

---

# ಆವಾವ ದಾರಿಯಲು ಹೊಳೆಹಳ್ಳ ಹರಿದರೂ

೧

ಆವಾವ ದಾರಿಯಲು ಹೊಳೆಹಳ್ಳ ಹರಿದರೂ
ಮುನ್ನೀರಿನಾಳವನೆ ಸೇರಲೆಂದೇ!
ಆವಾವ ರೀತಿಯಲು ಶಶಿತಾರೆ ತಿರುಗಿದರು
ಆ ದಿವ್ಯ ಸೂರ್ಯನನೆ ಸಾರಲೆಂದೇ!

೨

ಆವಾವ ಕೊರಳಿನಲಿ ಹಕ್ಕಿಗಳು ಹಾಡಿದರು
ಆ ನಾದಬ್ರಹ್ಮನಲಿ ಮೀಯಲೆಂದೇ!
ಆವಾವ ಬೆಡಗಿನಲಿ ಕುಸುಮಗಳು ಅರಳಿದರು
ತವೊಂದಾಪಾದ ಕೆಡೆಯೀಯಲೆಂದೇ

೩

ಆವಾವ ವೇಷದಲು ಜಗದಿ ನಾ ಭ್ರಮಿಸಿದರು
ನಿನ್ನನ್ನು ಕೊನೆಗೊಮ್ಮೆ ಕೂಡಲೆಂದೇ!
ಆವಾವ ಭಾವದಲು ನಾ ಹಾಡುತಿದ್ದರೂ
ನಿನ್ನುಸಿರನೇ ಜಗದಿ ತೀವಲೆಂದೇ!

# ತಿರುಕ.



ಬಿರುಗಾಳಿ ಭೋರೆಂದು ಬೀಸುತಿಹುದು !  
ಧರಣಿಯಲಿ ಕಾರಿರುಳು ಮುಸುಗುತಿಹುದು !  
ತಿರುತಿರುಗಿ ಸೋತಿರುವವೆನ್ನ ಕಾಲು !  
ಮುರಿಯಲಿದೆ ಊರೂರಿ ಕೈಯ ಕೋಲು !  
ಬಿರುಗಾಳಿಗಾರಲಿದೆ ಒಳಿಯ ಸೊಡರು !  
ಉರಿಯತೊಡಗಿಹುದೊಡಲ ಬೇರೆ ಬೇರು !  
ಒಬ್ಬರೂ ತುತ್ತೊಂದ ನೀಡಲಿಲ್ಲ !  
ಉಬ್ಬಿನಲಿ ಕಣ್ಣೆತ್ತಿ ನೋಡರಲ್ಲ !  
ಉಳಿದನ್ನವನು ಹಾಗೆ ಕೆಡಿಪರಲ್ಲ !  
ಹೊಲಗೆಲಸದಲಿ ಹೊನ್ನ ದುಡಿಪರಲ್ಲ !  
ನಿಟ್ಟುಸಿರ ಭರಕಾಸೆ ಬಾಗುತಿಹುದು !  
ನಟ್ಟಿರುಳ ಕಳ್ತಲೆಂಬಿ ತಾಗುತಿಹುದು !  
ಬನ್ನವನೆಯುಂಡುಂಡು ತೃಪ್ತಿಗೊಳಲೇ ?  
ಕಣ್ಣೀರ ಕುಡಿಕುಡಿದು ಶಾಂತಿಗೊಳಲೇ !  
ಕೈಯೊಳಿಹ ಹರಿವಾಣ ಬರಿದೆಯಿಹುದು !  
ಅಯ್ಯೊ ! ಕನಿಕರವೆಲ್ಲ ಬತ್ತಿರುವದೇ ?

## ಕೋರಿಕೆ

ಇನ್ನಾರು? ಇನ್ನಾರು? ಗತಿಯದಾರು?
ಅನ್ನವಿತ್ತೆಬ್ಬಿಸುವ ಕರುಣಿಯಾರು?
ಪರಮೇಶ, ಇಂದೆನಗೆ ನೀನೆ ಗತಿಯಲ್ತೇ?
ಕರುಣಿಯಲ್ತೇ? ನೀನು ಮಾದಾನಿಯಲ್ತೇ?
ಒಡಲಿನೀ ಬರಿಪಾತ್ರೆಯೊಡ್ಡಿರುವೆ ಮುಂದೆ!
ಕೊಡು ಎನಗೆ ಮರಣವನೊ ಹರಣವನೊ ತಂದೆ!

---

## ಬಡತನವೆ ಬೇಕು.

೧

ಅನುಭವಗಳಾಗರವ,
ಸಾಹಸದ ಸಾಗರವ,
ಕಾಣುವೊಡೆ,
ಬಡತನವೆ ಬೇಕು!

೨

ಪರಿಪರಿಯ ತಾಪವನು,
ಹಸಿವಿನಾ ಕೋಪವನು,
ತಾಳುವೊಡೆ,
ಬಡತನವೆ ಬೇಕು!

೩

ಬಡತನದ ಎದೆಮೆಟ್ಟಿ
ಸಿರಿತನವು ಕುಣಿಯುವುದ
ನೋಡುವರೆ,
ಬಡತನವೆ ಬೇಕು!

೪

ಗಂಡಗಳನುಂಡುಂಡು
ಪುಟಚಂಡಿನೊಲು, ಗಂಡು
ಗಲಿಯಾಗೆ,
ಬಡತನವೆ ಬೇಕು!

## ಬಾಲನ ದುಃಖ.

(ಒಂದು ಇಂಗ್ಲೀಷ ಕವಿತೆಯ ಅನುವಾದ)

"ಏ ಅಮ್ಮ, ನನಗಾಗಿ ಕಡೆ ಎನ್ನಯಣ್ಣನನು!
ನಾನೊಬ್ಬನೇ ಈಗ ಆಡಲಾರೆ!
ಕಮ್ಮಲರು ಮಲರುಣಿಗಳೊಡನೆ ಬಂದಿದೆ ಸುಗ್ಗಿ!
ಎಲ್ಲಿ ಹೋಗಿಹನಣ್ಣ? ಕರೆದು ಬಾರೇ!

೨

"ಹೂಗಳಗೊ ಸುರಿದಿಹವು ನಾವು ಹಚ್ಚಿದ ಹೂವು!
ನಮ್ಮ ತೋಟದ ಗಿಡದ ಸುತ್ತು ಮುತ್ತು!
ದ್ರಾಕ್ಷೆವಳ್ಳಿಯು ದ್ರಾಕ್ಷೆ ಗೊಂಚಲಲಿ ಬಳಕುತಿದೆ!
ಕರೆಯುವನ! ಅಮ್ಮ, ಹೋಗಿರುವನೆತ್ತ?"

೩

ನಲ್ಲೂಸೆ, ನಿನ್ನ ದನಿಯನು ಕೇಳಲಾರನವ!
ನಿನ್ನೆಡೆಗೆ ತಿರುಗೆಂದು ಬರಲಾರನು!
ಸುಗ್ಗಿಯುಂದದೊಳೊಮ್ಮೆನಕ್ಕ ಆತನ ಮೊಗವು
ಕಾಣಿಸದು ನಿನಗ, ಜಗದೊಳಿನ್ನು!

## ಕೋರಿಕೆ

೪

"ಕಿರಿದಾದೊಡೆಯು ಗುಲಾಬಿಯು ದಿವ್ಯ ಬಾಳ ಸೊಗ
ವವನಿಗಾ ಶಿವನು ದಯಪಾಲಿಸಿದ್ದ!
ಆದರಿಂದೆ ಬಾಳ, ನೀನೊಬ್ಬನೇ ಆಡಯ್ಯ!
ಸಗ್ಗದೊಳಗಿಹನು ನಿನ್ನಣ್ಣ ಮುದ್ದೆ!"

೫

"ಹಕ್ಕಿಗಳ, ಹೂಗಳನು ಬಿಟ್ಟು ತಾ ನಡೆದನೇ?
ನಾನವನ ಸುಮ್ಮನೇ ಕರೆಯಲೇನೇ?
ಈ ದೀರ್ಘ-ದೀರ್ಘ ಸುಗ್ಗಿಯ ಕಾಲದಲಿ ಕೂಡ
ನನ್ನ ಕೂರ್ಪಿನ ಅಣ್ಣ ಮರಳನೇನೇ?

೬

"ಹಳ್ಳದಲಿ ಹುಲ್ಲಗದ್ದೆಗಳಲ್ಲಿ ಜೊತೆಯಾಗಿ
ನಾವಲೆವುದಿಂದಿಗೇ ಕೊನೆಯಾಯಿತೇ?
ನನ್ನೊಡನೆಯಾಡುತಿದ್ದಾಗಲೇ ನಾನವಗೆ
ಮಿಗೆ ಪ್ರೇಮವನು ತೋರಬಾರದಿತ್ತೇ?

---

# ಪ್ರಶ್ನೋತ್ತರ.



೧

ಕಾಡ ಹೂ:— ಸಂಪಿಗೆಯು, ಮಲ್ಲಿಗೆಯು,
ಕಂಪೊಗೆವ ಪೂಗಳಿರೆ,
ಯಾರಿತ್ತನೋಲ್ಪರೀ
ಕಾಡ ಹೂವ?
ಸೇರುವದದೆಂತು ನಾ
ಜಗದ ಭಾವ?

ಉತ್ತರ:— ಕಾಡ ಹೂವಿರಲೇನು?
ನಾಡೆ ಎದೆಯರಳಿರಲಿ!
ಧರೆಯು ನಿರುಕಿಸದಿರಲು,
ಹಾನಿಯೇನು?
ಅಗಳಿದದೆಗೀಶನವ-
ನೊಲಿಯುನೇನು?

೨

ಮಿಂಚಹುಳ:— ಉಡು ಚಂದ್ರಭಾಸ್ಕರರು
ಪೊಡವಿಯನು ಬೆಳಗುತಿರೆ,
ಇರುವದೇಕಿಲ್ಲಿ ನಾ
ಮಿಂಚ ಹುಳವು?
ಧರೆಯೊಳಗೆ ಅವರ ಮುಂ-
ದೆನ್ನ ಬಲವೇ?

ಉತ್ತರಃ— ಅವರು ಮರೆಯಾಗೆ, ನಿಶೆ
ಕವಿಯಲವನಿಯು, ನಿನ್ನ
ಕಿರಿವೆಳಕಿನಿಂ ಜಗಕೆ
ನೆರವ ನೀಡು!
ಬರಲವರು, ಮನ್ನಿಸುತ
ಮೌನಗೂಡು!

೩

ಮನುಜಃ— ಬಿತ್ತರದ ಬಾನಿಹುದು!
ಎತ್ತರದ ಗಿರಿಯಿಹುದು!
ನೆಲೆಯಿರದ ಕಡಲಿದೆ! ವಿ-
ಶಾಲ ಸೃಷ್ಟಿ!
ತಿಳಿಯೆ, ಕಿರಿದೇಕಿನಿತು
ನನ್ನ ಸೃಷ್ಟಿ?

ಉತ್ತರಃ— ಕಿರಿಯನಾದರು, ನಿನಗೆ
ಹಿರಿಯ ಮನದೊಲವಿಹುದು!
ಅರಿಯುವೊಡೆ ನೀನಿವನು
ಮೀರಬಲ್ಲೆ!
ಪರಮನದ್ಭುತಕೆ ತಲೆ-
ವಾಗಿ ನಿಲ್ವೆ!

೪

ಸುಗುಣಿಃ— ಜ್ಞಾನಶರಧಿಯೊಳಿನಗೆ
ಜ್ಞಾನಿಯೊಲು ಮುಳುಮುಳುಗಿ
ಜ್ಞಾನದಾಳವ ಕಾಣ್ವ
ಶಕ್ತಿಯಿಲ್ಲ!

## ಕೋರಿಕೆ

ಏನು ಮಾಡಲಿ? ಇನ್ನು
    ಮುಕ್ತಿಯೆಲ್ಲಿ?

ಉತ್ತರ:— ಜ್ಞಾನಿಯೊಲು ಮುಳುಮುಳುಗಿ
ನೀನು ದಣಿವುದು ಬೇಡ!
ತಿಳುವುಗಡಲಲಿ ಈಜು-
    ಗಾಯಿಗಳೊಲು
ತೇಲ್ವ ಸುಗುಣಗಳಿಂದೆ
    ಬಾಂಟು ಕಡಲ!

೫

ಜ್ಞಾನಿ:— ಮುಳುಮುಳುಗಿದಂತಿದರ
ನೆಲೆಯು ಕೆಳಗಿಳಿಯುವದು!
ಜ್ಞಾನದೀ ಕಡಲ ನೆಲೆ
    ಕಾಣ್ಬುದೆಂತೋ!
ಕಾಣದಿರೆ, ಪೂರ್ಣತೆಯ
    ಆಸೆಯೆಂತೋ!

ಉತ್ತರ:— ತಿಳುವ ನೆಲೆ ನೆಲೆಯಾಚೆ!
ಬೆಲೆಯುದಕೆಯುದರಿಂದೆ!
ಪೂರ್ಣನೊಬ್ಬನೆ! ಇದರೊ-
    ಳೆಲ್ಲ ಜನರು
ಪೂರ್ಣರಾಗಲು ಹಾಗೆ
    ಮುಳುಗುತಿಹರು!

---

# ಇದನೆ ಕರುಣಿಸು!



೧

ಬಡತನದಿ ಹುಟ್ಟಿಸುತ,
ಬಡತನದಿ ಬಳೆಯಿಸುತ,
ಬಡತನದ ಸವಿಕಹಿಗಳುಣಲು ಕೊಟ್ಟೆ!
ಬಡತನದಿ ನನ್ನಂತೆ
ಮಿಡುಕುತಿಹ ಬಾಂಧವರ
ಒಡನಾಡಿಯಾಗುವೊಲು ಬಗೆಯ ಕೊಟ್ಟೆ!

೨

ಪರಿಪರಿಯ ಕಷ್ಟದಲಿ
ನರನರಳಿ ಮರುಗುತಲಿ
ತೆರೆಯೊಳಗೆ ಬಿದ್ದಿರುವ ಬಡವರನ್ನು
ನಿರುಕಿಸದಲೈಸಿರಿಯ
ಭರದೊಳಗೆ ತುಳಿತುಳಿದು
ಮೆರೆವವರ ಕಾಣುವಾ ಕಣ್ಣ ಕೊಟ್ಟೆ!

೩

ಸರಿಯುತೀ ಮೋಡಗಳು,
ಇರುಳು ಬೆಳಕಾಗಿ, ಬಡ-
ವರ ರವಿಯು ಕೊನೆಗೊಮ್ಮೆ ಬರುವನೆಂಬ
ನೆರೆ ನಂಬುಗೆಯನಿತ್ತೆ!
ಪರಮಾತ್ಮ, ಇದನೆ ಕೊನೆ-
ವರೆಗು ನೀ ಬಿಡದೆನಗೆ ಕರುಣಿಸಯ್ಯಾ!

# ಇದ್ದಾಗ ಬಿದ್ದಾಗ!

ಇದ್ದಾಗ ಕಣ್ಣೆತ್ತಿ ನೋಡದವರು
ಬಿದ್ದಾಗ ಬಂದೇನ ಮಾಡುವವರು?
ಇದ್ದಾಗ ಪ್ರೇಮವನು ತೋರದವರು
ಬಿದ್ದಾಗ ಬಂದೇನ ಕೋರುವವರು?
ಆದೊಡೆಯು, ಜೀವವದು ಕಣ್ಮುಚ್ಚಿ ತೊಲಗೆ,
ಆದರದೊಳೆಂಬಂತೆ ಜನವು ಹೆಣದೆಡೆಗೆ
ಬಂದತ್ತು ಕರೆಕರೆದು ಬಾಯ್ಬಿಟ್ಟು ಬೇಡಿ,
ಕೊಂಡಾಡಿ, ಮುಂಡಾಡಿ, ಕೈಗಳನು ನೀಡಿ,
'ಬಾ' ಎಂದು, 'ಹಾ' ಎಂದು, 'ಅಯ್ಯಯ್ಯೊ' ಎಂದು,
ಬಾಯಿ ಕಣ್ಕೈಗಳಲಿ ಮುನ್ನಮೆಂದೆಂದು
ತೋರದಿಹ ಒಲವು ದಯೆ ನೆರವುಗಳ ನಟನೆ
ಬೀರುವದು! ಇದು ಎಂಥ ಸೋಜಿಗದ ಘಟನೆ!
ಜೀವವಾವಾಗಲೂ ಬಾಯ್ದೆರೆವುದೆಂದು,
ಸಾವು ಬೇಡದಲೇನು, ಸುಮ್ಮಗಿಹುದೆಂದು,
ಜೀವಿಸಿಹ ಬಾಳುವೆಗೆ ಬೆಲೆಯಿಲ್ಲವೇನೋ!
ಸಾವು ಪಿಡಿದಿಹ ಬಾಳ್ಗೆ ಬೆಲೆ ಬರುವದೇನೋ!

# ಬ್ರಹ್ಮಪಕ್ಷಿ

೧

ಆದಿಯನಾದಿಯ ಆಚೆಗೆ ಆಚೆಗೆ,
ನಾದಬಿಂದುಕಳೆಯಾಚೆಗೆ ಆಚೆಗೆ,
ನೋಟಕು ನಿಲುಕದ, ನುಡಿಗೂ ಸಿಲುಕದ,
ಮಾಟದ ಆಚೆಯ ಮಾಟಕು ಉಲುಕದ,
"ಏನೇನಿಲ್ಲಂ"ಬುವ ಆ ಪಕ್ಕಿ
ತಾನೇ ತಾನಾಗಿದ್ದಿತು ಉಕ್ಕಿ!

೨

ಬೊಮ್ಮವಕ್ಕಿಯದು ಎಂತೋ ಏನೋ,
ಸುಮ್ಮನಿರದೆ ಸಲ್ಲೀಲೆಗೆ ಏನೋ,
ಹೊಟ್ಟೆವಂದು ತಾ ತನ್ನ ಬಗೆಯೊಳೇ,
ಇಟ್ಟಿತು ಅನೇಕ ತತ್ತಿತತ್ತಿಗಳ!
ಒಂದೊಂದರೊಳೇ ಅಗಣಿತ ತತ್ತಿ!
ಕುಂದದೊಳಗಿಹುದು ಜೀವದ ಜ್ಯೋತಿ!

೩

ಗಣನೆಗೆ ಮೀರಿಹ ತತ್ತಿಗಳಿಡುತಲಿ,
ಅನಿಶವು ಅವುಗಳ ಮೇಲ್ಕೂರುತಲಿ,
ಮುಗಿಯದ ಪ್ರೇಮದ ಕಾವನು ಕೊಡುತಲಿ,
ಒಗೆಯಿಸುತಿದೆ ತನ್ನೊಳಿಹ ಮರಿಗಳ!
ಎರಕದ ಕಾಪಿಗೆ ಜೀವವು ಹಿಗ್ಗಿ
ಹೊರಬರಲೆಳಸುದು ಮೇಲಕೆ ನುಗ್ಗಿ!

ಕೋರಿಕೆ.

೪

ತತ್ತಿಯು ಒಳಗಣ ಎನಿತೊ ತತ್ತಿಗಳು
ಮುತ್ತಿದ ಭಾವದ ಭರದ ಕುತ್ತಿನಲಿ
ಕೆಳಕೆಳಗಿಳಿಯುಲು, ಪ್ರೇಮದ ಬಿಸುಪನು
ತಲುಪಲವಕೆ ತಡವಹುದೆನಿತೋ ದಿನ!
ಕುತ್ತನು ಮೆಟ್ಟುತ ಮೇಲಕ್ಕೆದ್ದ
ತತ್ತಿಗೆ ಕಾವದು ಸಿಗುವದು ಸಿದ್ಧ!

೫

ಕಾಪಿನ ಬೆಳಕಲಿ ಒಳಗಣ ಜೀವವು
ಆ ಪಕ್ಕಿಯು ಬೆಳಗುವ ಚಿದ್ರೂಪವ
ದಿಟ್ಟಿಸಿ, ನಲಿಯುತಲುಲಿಯುಲು ಹಾರಲು
ಥಟ್ಟನೆ ಹೊರಬಹುದದ ತಾ ಸೇರಲು!
ಈ ಪರಿ ತತ್ತಿಗಳೆಲ್ಲವ ನೊಡೆದು
ಆ ಪಕ್ಕಿಯು, ಜೀವವು ಸೇರುವದು!

೬

ಬೊಮ್ಮವಕ್ಕಿಯುದು, ಅನಂತಕಾಲದಿ
ಬೊಮ್ಮವರಿಗಳನು ಪುಟ್ಟಿಸೆ, ಚಿತ್ತದಿ
ಮೆರೆಯುವ ಬ್ರಹ್ಮಾಂಡವ ತಾನಿಕ್ಕುತ
ಸುರಿಪುದು ಕಾವಿನ ಧಾರೆಯು ಸಂತತ!
ಬೊಮ್ಮನ ಮರಿಯಾಗುವ ಜೀವ
ನೆಮ್ಮಲುಬೇಕಾ ಬಲ್ಗಾವ!

---

# ಕೋಮಲತೆ!



೧

ವಿಶ್ವದೆಳೆತನದೊಳಗೆ
ಮುಗುಳುನಗೆ ಮೊಗದೊಳಗೆ
ನಲಿದ ಕೋಮಲತೆ. ಈಗಿರುವದೆಲ್ಲಿ?
ನಿನ್ನಕ್ಕೆ ಸೋಂಕಿನಲಿ
ಮುಳ್ಳುಗಳ ಕೊಂಕಿನಲಿ
ಸೊಬಗೊಂದು ಚಿಗಿದು ಬಗೆ ಸೆಳೆವುದಲ್ಲೇ?

೨

ಎಳೆತನವು ಮರೆಯಾಗಿ
ಬೆಳವಣಿಗೆ ಹೊರೆಯಾಗೆ,
ಮೆಲ್ಲನೇ ಕಾಲ್ದೆಗೆಯುತೆನ್ನ ತೊರೆದೆ!
ಎಳೆತನದಿ ನಿನ ಕಂಡ
ಬಗೆಯಿಂದು ಬಲು ಬೆಂದು!
ಬಾಳುವೆಯು ಸೊಬಗೆಲ್ಲ ಬರಿದು! ಬರಿದು!

೩

ನೀನಿಲ್ಲದಲೆ ತಾಯೆ,
ಬೆಳೆದ ಜಗವಿದೊ ಬಾಯು
ಬಿಡುತಲಿದೆ! ಮತ್ತದಕೆ ನಗೆಯೂಡಿಸು!
ನಿನ್ನ ರಸದೊಳಗದ್ದಿ
ಜಗದ ಬಗೆಗಳ, ತಿದ್ದಿ,
ಮರಳಿ ನಿಜಸುಖದ ಸೊಬಗನು ಮಾಡಿಸು

# ಬಿನ್ನಹ

೧

ಬಗೆವಳ್ಳಿಯಲಿ ದೇವ, ಬಗೆಬಗೆಯ ಕೋರಿಕೆಗ
ಳಲರುಗಳು ಬಗೆಬಗೆಯೊಳರಳುತಿಹವು!
ಹಗಲಿರುಳು ಎನ್ನದಲೆ ಋತುಕಾಲವೆನ್ನದಲೆ
ಸೋಲಿರದೆ ನಿನಗಾಗಿಯರಳುತಿಹವು!

೨

ವಾಸನೆಯುವಿರುವವೊ, ಬಣ್ಣಬಣ್ಣದವಿಹವೊ,
ಬಣ್ಣವಾಸನೆಯೆರಡನುಳಿದವಿಹವೋ!
ಮೂಸಲ್ಕೆ ತಕ್ಕವೋ, ಮುಡಿಯಲ್ಕೆ ತಕ್ಕವೋ
ಅಡಿಯ ಸೇವೆಗೆ ತಕ್ಕವಿರುತಿರುವವೋ!

೩

ತೀವಿರುವ ಕಂಪಿನಲಿ, ಶಾಶ್ವತದ ಪೆಂಪಿನಲಿ
ನಿನ್ನ ಹೃದಯಕೆ ಹಾರವಾಗಲಿಹವೋ!
ಯಾವುದಕು ಬಾರದಲೆ ಸುಮ್ಮನೇಯುರಳಿ ಭೂ-
ಮಿಗೆ ಬಿದ್ದು ಹುಡಿಗೂಡಿ ಹೋಗಲಿಹವೋ!

೪

ಯಾವುದನು ತಿಳಿಯದಲೆ ದೇವನೇ, ನಾನಿಂದು
ನಿನ್ನೋರ್ವ ಬಹು ದಿನ ಸೇವಕನೊಲು,
ಭಾವನೆಯ ಬುಟ್ಟಿಯಲಿ ಬಗೆಯ ಪೂಗಳನೆಲ್ಲ
ಆಯ್ದಾಯ್ದು ತಂದಿರುವೆ ನಿನ್ನೆದೆಯೊಳು!

## ಕೋರಿಕೆ.

೫

ಬಗೆಗೆನಿಸಿದೊಲು, ನೀನು ಮೂಸು, ಮುಡಿಯುಡಿಗಿರಿಸ
ನಿನ್ನ ಹೃದಯದ ಹಾರಕುಪಯೋಗಿಸು!
ಬಗೆದು ಬಿಡು, ಇಲ್ಲದೊಡೆ, ಮಣ್ಣೊಡಲೆಂದಿವನು,
ಎನುತ ಬಿನ್ನವಿಸುವೆನು ವಿಶ್ವದೀಶಾ!

